॥ ಶ್ರೀಃ ॥

ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯ,

ಉಡುಪಿ.

## ದಾಸರಪದಗಳು.

# ಪುರಂದರದಾಸರಕೀರ್ತನೆ

## ಭಾಗ ೨.

ಆರನೆಯ ಛಾಪಾ

ಉಡುಪಿ ಶ್ರೀಕೃಷ್ಣಮುದ್ರಣಾಲಯದಲ್ಲಿ ಮುದ್ರಿಸಲ್ಪಟ್ಟಿತು.

1928.

ಬೆಲೆ: ೧೦ ಆಣೆ.

# ಅನುಕ್ರಮಣಿಕೆ.

| | ಪದ ಸಂಖ್ಯೆ |
|---|---|

ಪದಸಂಖ್ಯೆ.

॥ ಶ್ರೀಃ ॥

॥ ಶ್ರೀಗುರುಭ್ಯೋ ನಮಃ ॥

॥ ಶ್ರೀಗೋಪಾಲಕೃಷ್ಣಾಯ ನಮಃ ॥

# ಪುರಂದರದಾಸರ ಕೀರ್ತನೆಗಳು.

## ಎರಡನೆಯ ಭಾಗವು.



### ೧. ರಾಗ ನಾಟಿ, ಝಂಪೆತಾಳ.

ವಂದಿಸುವದಾದಿಯಲಿ ಗಣನಾಥನಾ । ಸಂದೇಹಸಲ್ಲ ಶ್ರೀಹರಿಯಾಜ್ಞೆ ಯಿದಕುಂಟು ॥ ಪಲ್ಲ ॥ ಹಿಂದೆ ರಾವಣ ತಾನು ವಂದಿಸದೆ ಗಜಮುಖನ । ನಿಂದು ತಪವನೆ ಗೈದು ವರಪಡೆಯಲು ॥ ಒಂದು ನಿಮಿಷದಿ ಬಂದು ವಿಘ್ನವನು ಆಚರಿಸಿ । ತಂದು ವರಗಳನೆಲ್ಲ ಧರೆಗೆ ಇಳಿಸಿದನು ॥ ॥ ೧ ॥ ಅಂದಿನಾ ಬಗೆಯರಿತು ಬಂದು ಹರಿ ಧರ್ಮಜಗೆ । ಮುಂದೆ ಗಣಪನ ಪೂಜಿಸೆಂದು ಪೇಳೇ ॥ ಒಂದೆ ಮನದಲಿ ಬಂದು ಪೂಜಿಸಲು ಗಣನಾಥ । ಹೊಂದಿಸಿದ ನಿರ್ವಿಘ್ನದಿಂದ ರಾಜ್ಯವನೂ ॥ ೨ ॥ ಇಂದು ಜನರೆಲ್ಲ ಉಮೆನಂದನನ ಪೂಜಿಸಲು । ಚಂದದಿಂದಲಿ ಸಕಲಸಿದ್ಧಿಗಳನಿತ್ತು ॥ ತಂದೆ ಶ್ರೀಪುರಂದರವಿಠಲನ ಸೇವೆಯೊಳು । ಬಂದ ವಿಘ್ನವ ಕಳೆದಾನಂದವನು ಕೊಡುವಾ ॥ ೩ ॥ ಶ್ರೀಃ ॥

### ೨. ರಾಗ ಧನಾಶಿ, ಆದಿತಾಳ.

ರಾಮಮಂತ್ರವ ಜಪಿಸೊ । ಹೇ ಮನುಜಾ । ರಾಮಮಂತ್ರವ ಜಪಿಸೋ ॥ ಪಲ್ಲ ॥ ಆ ಮಂತ್ರ ಈ ಮಂತ್ರ ನೆಚ್ಚಿ ನೀ ಕೆಡಬೇಡ । ಸೋಮಶೇಖರ ತನ್ನ ಭಾಮಿನಿಗೊರೆದಿಹಾ ॥ ಅನುಪಲ್ಲ ॥ ಕುಲಹೀನನಾದರು

ಕೂಗಿ ಜಪಿಸುವ ಮಂತ್ರ । ಸಲೆ ಬೀದಿಯೊಳು ಉಚ್ಚರಿಪ ಮಂತ್ರ ॥ ಹಲವು ಪಾಪಂಗಳ ಹತಗೆಡಿಸುವ ಮಂತ್ರ । ಸುಲಭದಿಂದಲಿ ಸ್ವರ್ಗ ಸೂರೆಗೊಂಬುವ ಮಂತ್ರ ॥ ೧ ॥ ಸ್ನಾನ ಮೌನಂಗಳಿಗೆ ಸಾಧನದ ಮಂತ್ರ । ಮಾನವರು ಮನದಿ ಧ್ಯಾನಿಪ ಮಂತ್ರ ॥ ಹೀನ ಗುಣಂಗಳ ಹಿಂಗಿಸುತಿಹ ಮಂತ್ರ । ಏನೆಂಬೆ ವಿಭೀಷಣಗೆ ಪಟ್ಟಗಟ್ಟಿದ ಮಂತ್ರ ॥ ॥ ೨ ॥ ಸಕಲ ವೇದಗಳಿಗೆ ಸಾರವೆನಿಪ ಮಂತ್ರ ಮುಕುತಿಮಾರ್ಗಕೆ ಇದೇ ಮೂಲಮಂತ್ರ ॥ ಭಕುತಿರಸಕೆ ಒಮ್ಮೆ ಬಟ್ಟೆ ದೋರುವ ಮಂತ್ರ । ಸುಖನಿಧಿ ಪುರಂದರವಿಠಲನ ಮಹಾಮಂತ್ರ ॥ ೩ ॥ ಶ್ರೀಃ ॥

## ೩. ರಾಗ ಸಾವೇರಿ, ಆದಿತಾಳ.

ಹರಿಯೆ ಸರ್ವೋತ್ತಮ ಹರಿಯೆ ಪರದೈವತ । ಹರಿಯೆ ಸರ್ವಂ ವಿಷ್ಣುಮಯಂ ಜಗತ್ತು ॥ ಹರಿಯಲ್ಲದನ್ಯತ್ರ ದೈವಗಳಿಲ್ಲವೆಂದು । ಉರಗನ ಮಂಡೆಯ ಪಿಡಿದು ಪೇಳುವೆನಯ್ಯ ॥ ಪಲ್ಲ ॥ ಜಗಂಗಳ ಪುಟ್ಟಿಸುವ ಬೊಮ್ಮ ನಿನ್ನ ಮಗ । ಜಗವ ಸಂಹಾರಕ ನಿನ್ನ ಮೊಮ್ಮಗ ॥ ಜಗದ ಪಾವನೆ ಭಾಗೀರಥಿ ನಿನ್ನ ಮಗಳಯ್ಯ । ಜಗದ ಜೀವರ ಮಾತೆ ನಿನ್ನರಸಿಯೋ ದೇವಾ ॥ ೧ ॥ ವಿಶ್ವತೋಮುಖ ನೀನೆ ವಿಶ್ವತಶ್ಚಕ್ಷು ನೀನೇ । ವಿಶ್ವತೋಬಾಹು ವಿಶ್ವ ಉದರ ನೀನೇ ॥ ವಿಶ್ವವ್ಯಾಪಕ ವಿಶ್ವಸೂತ್ರ ಧಾರಕ ನೀನೇ । ವಿಶ್ವನಾಟಕ ವಿಶ್ವ ವಿಷ್ಣುವೇ ನಮೋ ಯೆಂಬೇ ॥ ॥ ೨ ॥ ಆಗಮ ನಿಗಮ ಪುರಾಣಗಳೆಲ್ಲವು । ಯೋಗಿಜನಗಳೆಲ್ಲ ಪೊಗಳುತ್ತಿರೇ ॥ ನಾಗಶಯನ ಭೋಗಿಭೂಷಣವಂದಿತ । ಭಾಗವತರ ಪ್ರಿಯ ಪುರಂದರವಿಠಲನೇ ॥ ೩ ॥ ಶ್ರೀಃ ॥

## ೪. ರಾಗ ಭೈರವಿ, ಆದಿತಾಳ.

ಮಧುಕರ ವೃತ್ತಿ ಎನ್ನದು । ಅದು ಬಲು ಚೆನ್ನದು ॥ ಪಲ್ಲ ॥ ಪದುಮನಾಭನ ಪಾದ । ಪದುಮ ಮಧುಪವೆಂಬ ॥ ಅನುಪಲ್ಲ ॥ ಕಾಲಿಗೆ ಗೆಜ್ಜೆ ಕಟ್ಟಿ । ನೀಲವರ್ಣನ ಗುಣ ॥ ಆಲಾಪಿಸುತ್ತ ಬಲು । ಮೋಲಗ

ವಮಾಡುವಂಥ ॥ ೧ ॥ ರಂಗನಾಥನ ಗುಣ । ಹಿಂಗದೆ ಪೊಗಳುತ್ತ ॥ ಶೃಂಗಾರ ನೋಡುತ್ತ । ಕಂಗಳಾನಂದವೆಂಬ ॥ ೨ ॥ ಇಂದಿರಾಪತಿ ಪು । ರಂದರವಿಠಲನಲ್ಲಿ ॥ ಚಂದದ ಭಕ್ತಿಯಿಂದಾ । ನಂದವ ಪಡುವಂಥ ॥ ೩ ॥ ಶ್ರೀಃ ॥

## ೫. ರಾಗ ಮೋಹನ, ಅಟತಾಳ.

ವಿಷಯದ ವಿಚಾರ ಬಿಡು । ವಿಹಿತ ಕರ್ಮವ ಮಾಡು । ವೈರಾಗ್ಯ ಭಾಗ್ಯ ಬೇಡೂ ॥ ಪಲ್ಲ ॥ ವಿಷವೆಂದು ಕಾಮಕ್ರೋಧಗಳೆಲ್ಲ ನೀಡ್ಯಾಡು । ಮಸಣ ಮನವೇ ಮಾಧವನ್ನ ಕೊಂಡಾಡೂ ॥ ಅನುಪಲ್ಲ ॥ ಅನುದಿನವು ಹರಿಕಥೆಯ ಕೇಳಿ ಸಂತೋಷಪಡು । ವಿನಯದಿ ಸಜ್ಜನರ ಕೂಡೂ ॥ ಮನಮುಟ್ಟಿ ದುರಾಚಾರ ಮಾಳ್ಪರನು ನೀ ಕಾಡು । ಹಣ ಹೊನ್ನು ಪರಹೆಣ್ಣು ಹಂಚೆಂದು ನೋಡೂ ॥ ೧ ॥ ವೇದಶಾಸ್ತ್ರಾರ್ಥ ತತ್ವದ ವಿಚಾರವ ಮಾಡು । ಮಾಧವನಭಕ್ತಿ ಬೇಡೂ ॥ ಪಾದದಿಂದಲಿ ತೀರ್ಥಯಾತ್ರೆಗಳ ನೀ ಮಾಡು । ಖೇದಬಡದನುದಿನದಿ ಸಂತೋಷ ಕೊಡೂ ॥ ೨ ॥ ನಂಬದಿರು ಈ ದೇಹ ಅಂಬುಗುಳ್ಳೀಯಂತೆ । ನಂಬಿ ನೀ ಕೆಡಲು ಬೇಡಾ ॥ ಕೊಂಬುವರು ಬಂದರೆ ಕೊಡರೊಂದು ಕಾಸನು । ಅಂಬುಜಾಕ್ಷ ಪುರಂದರವಿಠಲನ್ನ ನೆನೆ ಮನವೇ ॥ ೩ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೬. ರಾಗ ಮುಖಾರಿ, ಝಂಪೆತಾಳ.

ಬಲವು ಬಲವೇ ನಿನ್ನ ಬಲವಲ್ಲದೆ । ಮಿಕ್ಕ । ಬಲಗಳುಂಟೆ ಬಣಗು ಗ್ರಹಗಳಿಂದಾ ॥ ಪಲ್ಲ ॥ ಹರಿ ನಿನ್ನ ಕೃಪೆ ಯೆನಗೆ ಚಂದ್ರತಾರಾಬಲವು । ಹರಿ ನಿನ್ನ ಕರುಣವೇ ರವಿಯ ಬಲವೂ ॥ ಹರಿ ನಿನ್ನ ಮೋಹವೇ ಎನಗೆ ಗುರುಭೃಗು ಬಲವು । ಹರಿ ನಿನ್ನ ಒಲುಮೆಯೇ ಶನಿಯ ಬಲವೂ ॥ ೧ ॥ ಮಂಗಳಮಹಿಮ ನಿನ್ನ ಅಂಗ ದರುಶನ ಸುಖದ । ಮಂಗಳನ ಬಲವು ಎನ್ನಂಗಕೆ ಸದಾ ॥ ರಂಗ ನಿನ್ನಯ ಚರಣ ಕಂಗಳಲಿ ನೋಡುವದು ।

ಹಿಂಗದೆ ಸುಖಿವನೀವ ಸೌಮ್ಯ ಬಲವಯ್ಯಾ ॥ ೨ ॥ ಆದಿಮೂರುತಿ ನಿನ್ನ ಅರಿವುದೆ ರಾಹುಬಲ । ಆದಿಮೂಲನೇ ನಿನ್ನ ಗುಣಕಥನವ ॥ ಆದರಿಸಿ ಕೊಂಡಾಡುತಿಹುದೆನಗೆ ಕೇತುಬಲ । ಆದಿಮಹಿಮನೆ ಮಹಾ ಪುರಂದರವಿಠಲಾ ॥ ೩ ॥ ಶ್ರೀಃ ॥

## ೭. ರಾಗ ಸೌರಾಷ್ಟ್ರ, ಆದಿತಾಳ.

ಅಂದೆ ನಿರ್ಣಯವಾದುದಕೆ । ಸಿರಿ । ಇಂದಿರಾಪತಿ ಪರದೇವತೆ ಎಂದೂ ॥ ಪಲ್ಲ ॥ ಅಂದು ಸ್ವಯಂವರದಲ್ಲಿ ಬ್ರಹ್ಮರುದ್ರಾದಿ । ಇಂದ್ರಾದಿಗಳೆಲ್ಲರಾ ಜರೆದು ॥ ಇಂದಿರೆ ನಿತ್ಯಾನಂದ ನಿರ್ದೋಷ ಗುಣಪೂರ್ಣ । ನೆಂದು ಮಾಲೆಯು ತಾ ಹಾಕಿದಳೂ ॥ ೧ ॥ ಸರಸಿಜೋದ್ಭವ ಹರಿಪಾದವ ತೊಳೆಯಲು । ಹರ ಭಕ್ತಿಯಿಂದ ಹರಿಪಾದ ತೀರ್ಥವ ॥ ಹರುಷದಿ ಸುರಮುನಿಗಳೆಲ್ಲರ ಮುಂದೆ । ಧರಿಸಿದನಂದು ಶಿರಸಿನಲ್ಲೀ ॥ ೨ ॥ ವೃಕನೆಂಬಾಸುರಗೆ ಹರ ವರವನೆ ಕೊಟ್ಟು । ಚಕಿತನಾಗಿ ಓಡಿ ಬಳಲುತಿರೆ ॥ ರುಕುಮಿಣಿಪತಿ ವೃಕಾಸುರನ ಭಸ್ಮವ ಮಾಡಿ । ಭಕತ ರುದ್ರನೆಂದು ಪಾಲಿಸಿದಾ ॥ ೩ ॥ ಕರಿಯಾದಿಮೂಲಗೆ ಮೊರೆಯಿಡಲದ ಕೇಳಿ । ಸುರರು ತಾವಲ್ಲವೆಂದು ಸುಮ್ಮನಿರಲು ॥ ಗರುಡನ ಪೆಗಲೇರಿ ಹರಿ ಬೇಗದಿ ಬಂದು । ಕರಿರಾಜನಂದು ತಾ ರಕ್ಷಿಸಿದಾ ॥ ೪ ॥ ಹರಿಹರ ವಿರಿಂಚರ ಲೋಕಗಳಿಗೆ ಪೋಗಿ । ಹರಿಹರವಿರಿಂಚರ ಪರಿಗಳನು ॥ ಹರುಷದಿ ಭೃಗುಮುನಿ ತಿಳಿದು ಬೇಗದಿ ಬಂದು । ಸರಸ್ವತಿ ತೀರದ ಋಷಿಗಳಿಗೊರೆದಾ ॥ ೫ ॥ ನಾಮತ್ರಯ ಪ್ರಭಾವದಿಂದಲಿ ಬೇಗ । ಸೋಮಧರನು ವಿಷವನೆ ಧರಿಸಿ ॥ ರಾಮನಾಮವೆಂಬ ಅಮೃತಪಾನದಿಂ । ಕಾಮಾರಿ ತಾ ಮೃತ್ಯುಂಜಯನಾದಾ ॥ ೬ ॥ ಸಂದೇಹಾತ್ಮಾ ವಿನಶ್ಯತಿ ಎಂಬ ಶ್ರುತಿ । ವೃಂದಗಳೆಲ್ಲವು ಸಾರುತಿರೆ ಪು ॥ ರಂದರವಿಠಲ ಸರ್ವೋತ್ತಮನೆಂಬಲ್ಲಿ । ಸಂದೇಹವ ಬಿಟ್ಟು ಸುಖಿಸೆಲೋ ಜೀವಾ ॥ ೭ ॥

## ೮. ರಾಗ ಪಂತುವರಾಳಿ, ಅಟತಾಳ.

ಹರಿಹರರು ಹ್ಯಾಗೆ ಸಮರು । ಹರಿಹರ ಭಕ್ತರೆ ಇದಕೆ ಸಾಕ್ಷೀ ॥ ॥ ಪಲ್ಲ ॥ ಹರಿಯ ಮಂದಿರ ವೈಕುಂಠಸ್ಥಾನಾ । ಹರನ ಮಂದಿರ ಸ್ಮಶಾನಾ ॥ ಹರಿಯ ಪಟ್ಟದ ರಾಣಿ ಸಿರಿದೇವಿ ಎಂಬರು । ಹರನ ಪಟ್ಟದ ರಾಣಿ ಗಿರಿಜೆ ಎಂಬರೂ ॥ ೧ ॥ ಹರಿಯು ಉಡುವೋದು ಪೀತಾಂಬರ । ಹರನುಡುವೋದು ಗಜಚರ್ಮಾಂಬರಾ ॥ ಹರಿಯು ಪೂಸುವದು ಶ್ರೀಗಂಧ ಕಸ್ತೂರೀ । ಹರನು ಪೂಸುವದು ಸ್ಮಶಾನದ ಬೂದೀ ॥ ೨ ॥ ಹರಿಯ ಕೊರಳೊಳು ಕೌಸ್ತುಭರನ್ನ । ಹರನ ಕೊರಳೊಳು ಗರಳದ ಚಿಹ್ನಾ ॥ ಹರಿಯ ಆಯುಧವು ವರಶಂಖಚಕ್ರ । ಹರನ ಆಯುಧವು ತ್ರಿಶೂಲ ಡಮರೂ ॥ ೩ ॥ ಹರಿಯ ಪರಿವಾರ ಬ್ರಹ್ಮಾದಿ ಸುರರು । ಹರನ ಪರಿವಾರ ಹೆಣನ ತಿಂಬುವರೂ ॥ ಹರಿಹರಿ ಎಂಬೋರು ಸಿರಿವಂತರಾಗೋರು । ಹರಹರ ಎಂಬೋರು ಹತರಾಗುವರೂ ॥ ೪ ॥ ಹರಿಗೆ ವಾಹನನಾದ ಖಗರಾಜನು । ಹರಗೆ ವಾಹನ ಗೋರಾಜನೂ ॥ ಪುರಂದರ ವಿಠಲಗೆ ಸರಸಿಜಾಸನ ಪುತ್ರ । ಹರ ಆಗಮೋಕ್ತ ಆದನು ಪೌತ್ರಾ ॥ ೫ ॥

## ೯. ರಾಗ ಶಂಕರಾಭರಣ, ತ್ರಿಪುಟತಾಳ.

ಸರ್ವಾಪರಾಧವ ಕ್ಷಮಿಸಯ್ಯ ಎನ್ನ । ಗರ್ವಾಂಧಕಾರವ ಬಿಡಿಸಿ ರಕ್ಷಿಸು ॥ ಪಲ್ಲ ॥ ಎಂದೆಂದು ಹಿರಿಯರ ನಿಂದಿಸಿದೆನೊ ಚೆಲ್ವ । ಚಂದನ ಗಂಧಿಯರೊಳ್ ಸರಸವಾಡಿದೆನು ॥ ಬಂಧು ಬಂದರೆ ಎನ್ನ ಬಿಗುವ ಬಿಂಕವ ತೋರೆ । ಬಂದೊಡ್ವರ್ಯೆ ಯೆನ್ನ ಬೇಕೆಂದು ಕೋರದೆ ॥ ಕುಂದ ಕುಡ್ಮಲದಂತ ಚಂದರದನ ಗೋ । ವಿಂದನ ಪಾದಾರವಿಂದವ ಸ್ಮರಿಸೆನು ॥ ಒಂದು ದಿನವು ನಾನು ಮಿಂದು ಮಡಿಯನುಟ್ಟು । ಗಂಧಪುಷ್ಪಾರ್ಚನೆಗಳು ಮಾಡೆನು ಎನ್ನ ॥ ೧ ॥ ಅನ್ನದಾನವ ಮಾಡಲರಿಯೆನು ನಾ ಮುನ್ನ । ಸ್ವರ್ಣದಾನದ ಮಾತು ಸೊಗಸದು ಕಿವಿಗೆ ॥ ಕನ್ಯಾದಾನದ ಮಾತು ಕನಸಿನಲಿ ನಾ ಕೇಳೆ । ಮುನ್ನ ಮರಿಯುದ ಮಹಮುಗ್ಧ ಕಾಣಯ್ಯ ॥ ಉನ್ನತ ಗೋದಾನ ಭೂದಾನ ಮೊದಲಾದ್ದು । ಸನ್ಮತಿಯಲಿ

ಕೊಟ್ಟು ಸುಖಿಸುವದರಿಯೆನು ॥ ಅನ್ಯಾಯುವ ಮಾಡಿ ಹರಿ ನಿನ್ನ ಮರೆ ಹೊಕ್ಕೆ। ಬೆಣ್ಣೆಕಳ್ಳನೆ ಮುದ್ದು ಚಿನ್ನ ಕೃಷ್ಣಯ್ಯ ॥ ೨ ॥ ಪಾಪಿಯರೊಳು ಅತಿಪಾಪಿ ಎಂತೆಂಬರು । ಕೋಪಿಯರೊಳು ಉಗ್ರಕೋಪಿ ನಾನೆ ॥ ಕೋಪತಾಪದ ವ್ಯಾಧಿಯನೆಲ್ಲ ಗುಣ ಮಾಡಿ । ಶ್ರೀಪತಿಯೆ ನೀ ಸಲಹೋ ಕರುಣದೀ ॥ ಈ ಪರಿಯಲಿ ಮೇಲುಕೋಟಿ ಇಂದಿರೆವರ । ಆಪದ್ಬಂಧುವೆ ಭಕ್ತರಘಹರನೆ ॥ ತಾಪತ್ರಯಗಳ ಬಿಡಿಸಿ ಚೆಲ್ವ ರಾಯ । ಗೋಪಾಲಮೂರುತಿ ಪುರಂದರವಿಠಲ ॥ ೩ ॥ ಶ್ರೀಃ ॥

## ೧೦. ರಾಗ ಮಧ್ಯಮಾವತಿ, ಅಟತಾಳ.

ರಾಮರಾಮೆನ್ನಿರೋ ಇಂಥಾ । ಸ್ವಾಮಿಯ ನಾಮವ ಮರಿಯದಿರೋ ॥ ಪಲ್ಲ ॥ ತುಂಬಿದ ಪಟ್ಟಣಕ್ಕೊಂಭತ್ತು ಬಾಗಿಲು । ಸಂಭ್ರಮದರಸುಗಳೈದು ಮಂದಿ ॥ ಡಂಭಕತನದಿಂದ ಕಾಯುವ ಜೀವವ । ನಂಬಿನೆಚ್ಚಿ ನೀವು ಕೆಡಬೇಡಿರೋ ॥ ೧ ॥ ನೆಲೆ ಇಲ್ಲದ ಕಾಯ ಎಲುವಿನ ಹಂದರ । ಬಲಿದು ಸುತ್ತಿದ ಚರ್ಮದ ಹೊದಿಕೆ ॥ ಮಲಮೂತ್ರಂಗಳು ಕೀವು ಕ್ರಿಮಿಗಳುಳ್ಳ । ಹೊಲಸು ತೊಗಲ ಮೆಚ್ಚಿ ಕೆಡಬೇಡಿರೋ ॥ ॥ ೨ ॥ ಹರಬ್ರಹ್ಮಸುರರಿಗೆ ವಂದ್ಯನು ಆಗಿಪ್ಪ । ಹರಿ ಸರ್ವೋತ್ತಮನೆಂದೆನ್ನಿರೋ ॥ ಪುರಂದರವಿಠಲನ ಚರಣವ ಭಜಿಸಿರೊ । ದುರಿತ ಭಯಗಳಿಂದ ದೂರಾಗಿರೋ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೧. ರಾಗ ಕಾಂಬೋಧಿ, ಝುಂಪೆತಾಳ.

ಏನು ಮರುಳಾದೆಮ್ಮ ಎಲೆ ರುಗ್ಮಿಣಿ । ಮಾನ ಹೀನ ಕುಲಗೊಲ್ಲ ಶ್ರೀಗೋಪಾಲಕೃಷ್ಣಗೇ ॥ ಪಲ್ಲ ॥ ಹಾಸಿಕೆಲ್ಲದೆ ಹಾವಿನಾ ಮೇಲೆ ಪವಡಿಸಿದ । ಹೇಸಿಕೆಲ್ಲದೆ ಕರಡಿಯಾ ಕೂಡಿದಾ ॥ ಗ್ರಾಸಕೆಲ್ಲದೆ ತೊತ್ತಿನಾ ಮಗನ ಮನೆಯಲುಂಡ । ದೋಷಕಂಜದೆ ಮಾತುಳನ ಶಿರವನಳಿದಗೆ ॥ ॥ ೧ ॥ ಮಂಡೆ ಬೋಳಾದವರ ಮನದೈವ ಇವನಂತೆ । ಕುಂಡ ಗೋಳ

ಕರ ಮನೆ ಕುಲದೈವವಂತೆ ॥ ಹಿಂಡು ಗೋವಳರೊಳಗೆ ಹಿರಿಯ ಗೋವಳನೆನಿಸಿ । ಭಂಡ ಪರಸತಿಯರಾ ಜಾರಚೋರನಿಗೆ ॥ ೨ ॥ ಒಬ್ಬರಲಿ ಹುಟ್ಟಿದನು ಒಬ್ಬರಲಿ ಬೆಳದವನು । ಒಬ್ಬರಿಗೆ ಮಗನಲ್ಲ ಭುವನದೆಲ್ಲಾ ॥ ಅಬ್ಬರದೇವ ನಮ್ಮ ಪುರಂದರವಿಠಲನ್ನ । ಉಬ್ಬುಬ್ಬಿ ಮದಿವ್ಯಾದಿ ಉತ್ಸಾಹದಿಂದಾ ॥ ೩ ॥ ಶ್ರೀಃ ॥

### ೧೨. ರಾಗ ಪಂತುವರಾಳಿ, ಅಟತಾಳ.

ಲೊಟಪಾಟ ಸಂಸಾರ ಏನಣ್ಣ । ಲೊಟಪಾಟ ಸಂಸಾರದೊಳಗೆ ಸಿಲುಕಿ ನಾ । ವಿಠಲ ನಿನ್ನ ಧ್ಯಾನವ ಮರತೆನಯ್ಯಾ ॥ ಪಲ್ಲ ॥ ಹುಟ್ಟಿದ್ದ ಮುಂಚೆ ಹಸಿವೆಯನರಿಯೆ । ಕೊಟ್ಟೆಯೊಳಗೆ ಎಂಟು ಆನೆಯ ಕಂಡೆ ॥ ಮನೆಯ ಒಳಗೆ ಏಳು ಕುದುರೆಯ ಕಂಡೆ । ಕಿಲ್ಲೆಯೊಳಗೆ ಏಳು ಚರಣವ ಕಂಡೆ ॥ ೧ ॥ ಯಾತದ ಮೇಲೆ ಹೋತ ಮೇವುದು ಕಂಡೆ । ಮಾತನಾಡುವ ಗುಬ್ಬಿಯ ಕಂಡೆ ॥ ರಾಜ್ಯವನಾಳುವ ಚಿಣ್ಣಾನೆ ಕಂಡೆ । ರೆಕ್ಕೆಯಿಲ್ಲದೆ ಹಾರ್ವ ಪಕ್ಷಿಯ ಕಂಡೆ ॥ ೨ ॥ ಕೇಳುಕೋಟಿಯೊಳೊಬ್ಬ ಅಗಸಾಲ ಸತ್ತರೆ । ಮೇಲುಕೋಟಿಯೊಳೊಬ್ಬ ಅಗಸತಿ ಅಳುವಳು ॥ ಅವನಿಗೂ ಅವಳಿಗೂ ಸಂಬಂಧವೇನೆಂದು । ಅದು ನೋಡಿ ನಗುತಿದ್ದ ಪುರಂದರವಿಠಲ ॥ ೩ ॥ ಶ್ರೀಃ ॥

### ೧೩. ರಾಗ ಶಂಕರಾಭರಣ, ಝಾಪುತಾಳ.

ನಿನ್ನ ಮಗ ಬೆನ್ನ ಬಿಡಲೊಲ್ಲ ಕಾಣೆ ನಿನ್ನಾಣೆ ಜಾಣೆ ॥ ಪಲ್ಲ ॥ ಅಲ್ಲಿ ನೋಡಲು ತಾನೆ ಇಲ್ಲಿ ನೋಡಲು ತಾನೆ । ಫುಲ್ಲಲೋಚನೆ ಸುಪ್ರವೀಣೆ ॥ ೧ ॥ ಹಿಂದೆ ನೋಡಲು ತಾನೆ ಮುಂದೆ ನೋಡಲು ತಾನೆ । ಮಂದಿರದೊಳಹೊರಗಿಹನೆ ॥ ೨ ॥ ಮುದ್ದು ಪುರಂದರವಿಠಲರಾಯನು । ಎದ್ದು ಬಂದಪ್ಪಿಕೊಂಡನೆ ॥ ೩ ॥ ಶ್ರೀಃ ॥

### ೧೪. ರಾಗ ಪಂತುವರಾಳಿ, ಅಟತಾಳ.

ಸುಜ್ಞೆಯಿಂದಾಳಬೇಕಣ್ಣ । ಗಂಡ । ನಾಜ್ಞೆಯ ಮೀರಿ ನಡವ ಲಂಡಹೆಣ್ಣ ॥ ಪಲ್ಲ ॥ ಅತ್ತೆಮಾವಗೆ ಅಂಜದವಳ । ತನ್ನ । ಉತ್ತಮ ಪುರು

ಷನ ಜರಿದು ನುಡಿವಳ ॥ ಭಕ್ತರ ಕಂಡು ಬಂಧಿಪಳ । ನಡು । ನೆತ್ತಿಯ ಚರ್ಮವ ಕೆತ್ತಬೇಕವಳ ॥ ೧ ॥ ಕೂಳು ಕೊಬ್ಬಿಲಿ ಉರಿವವಳ । ಗಂಡ । ಹೇಳಿದ ಮಾತು ಕೇಳದೆ ಮೀರುವವಳ ॥ ಸೂಳೆಯಂದದಿ ನಡಿವವಳ । ತಲೆ । ಬೋಳಿಸಿ ಕಸಹೆಡಿಗೆ ಹೊರಿಸಬೇಕವಳ ॥ ೨ ॥ ಹಟ್ಟಿ ಹಟ್ಟಿ ತಿರುಗುವಳ । ತನ್ನ । ಘಟ್ಟಿತನದಲಿ ಮಾರುಮುಲತವಳ ॥ ಬಟ್ಟೆಕುಚವ ತೋರಿಸುವಳ । ಹುಟ್ಟು । ಹುಟ್ಟಲಿ ಬಾಯೊಳು ಹೆಟ್ಟಬೇಕವಳ ॥ ೩ ॥ ನಲ್ಲರ ಕಂಡು ನಗುವಳ । ತನ್ನ । ಬಲ್ಲಿದ ಗಂಡನ ಬೈದು ಕರೆವಳ ॥ ಮಲ್ಲರಂದದಿ ಹೋರುವವಳ । ಅವಳ । ಹಲ್ಲು ಮುರಿದು ಜಿಹ್ವೆ ಸೀಳಬೇಕವಳ ॥ ೪ ॥ ಎಂದೂ ಈ ಪರಿಯಲ್ಲಿರುವಳ । ಅವಳ । ಅಂದವಮಾಡುವದ್ಯಾಕೆ ಬಿಡಬೇಕಿನ್ನವಳ ॥ ಒಂದಿಷ್ಟು ಗುಣ ಇಲ್ಲದವಳ । ಶ್ರೀಪು । ರಂದರವಿಠಲರಾಯಗಲ್ಲದವಳ ॥ ೫ ॥ ಶ್ರೀಃ ॥

## ೧೫. ರಾಗ ಪಂತುವರಾಳಿ, ಅಟತಾಳ.

ವ್ಯಾಪಾರ ನಮಗಾಯಿತು । ಶ್ರೀಪತಿಪಾದಾರವಿಂದಸೇವೆಯೆಂಬೊ ॥ ॥ ಪಲ್ಲ ॥ ಹರಿಕರುಣವೆ ಅಂಗಿ ಗುರುಕರುಣ ಮುಂಡಾಸು । ಹರಿದಾಸರ ದಯವೆಂಬೊ ವಲ್ಲಿ ॥ ಪರಮಪಾಪಿ ಕಲಿ ಎಂಬೊ ಪಾಪಾಸು ಮೆಟ್ಟಿ । ದುರಾತ್ಮರಾದವರ ಎದೆಮೇಲೆ ನಡೆವಂಥ ॥ ೧ ॥ ಬಿಳಿಯ ಕಾಗದ ಹೃದಯ ಬಾಯಿ ಕಲಮದಾನಿ । ನಾಲಿಗೆ ಎಂಬೊದು ಲೇಖಣಿಕೆಯು ॥ ಶ್ರೀಲೋಲನ ಕಥೆ ದಿವ್ಯ ನಾಮಂಗಳ । ಶೀಲಮನದಿ ಬರೆದು ಹರಿಗೆ ಒಪ್ಪಿಸುವಂಥ ॥ ೨ ॥ ಮುಂದಣ ಆಗಮ ಸಂಸಾರದ ಬಾಧೆ । ಎಂದೆಂದಿಗು ಅದರ ಭಯ ಬಿಟ್ಟಿತು ॥ ಹಿಂದಣ ಸಂಚಿತ ಸಾಲ ಭಾರಕ್ಕೆಲ್ಲ । ಸಂದಾಯವನು ಮಾಡಿ ಕತಬಿ ಹರಿಸಿ ಬಿಟ್ಟ ॥ ೩ ॥ ನುಡಿನುಡಿಗಾನಂದ ಬಾಷ್ಪರೋಮಾಂಚನೆ । ಮುಡುಪಿಯೊಳಗೆ ಇಟ್ಟ ಕೈಜಿತವು ॥ ಕಡೆಯ ಸಂಬಳಕೆಲ್ಲ ಮುಕುತಿ ಸಾಧನವನ್ನು । ಕೊಡುವಂತೆ ತಿರುಗದ ಚೀಟಿ ಬರಿಸಿ ಕೊಟ್ಟ ॥ ೪ ॥ ಕಂಡಕಂಡವರಿಗೆ ಕಾರ್ಪಣ್ಯಾವ ಬಟ್ಟು । ಮಂಡೆ

ಅಡ್ಡಾಗಿ ನಾ ಬಳಲಲಿಲ್ಲ ॥ ಪುಂಡರೀಕಾಕ್ಷ ಶ್ರೀಪುರಂದರವಿಠಲನು । ದಂಡಿಸಿ ವೀಳ್ಯವ ಕೊಟ್ಟು ಸೇವೆಯೊಳಿಟ್ಟ ॥ ೫ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೬. ರಾಗ ಶಂಕರಾಭರಣ, ರೂಪಕತಾಳ.

ನಂಬಬ್ಯಾಡಿ ನಾರಿಯರನು । ಹಂಬಲಿಸಿ ಹಿಗ್ಗಿ ॥ ಅಂಬುಜಾಕ್ಷಿಯ ರೊಲುಮೆ ಬಯಲ । ಡಂಬಕವೆಂದು ತಿಳಿಯಿರೋ ॥ ಪಲ್ಲ ॥ ಆಟ ವೆಲ್ಲ ಪುಸಿಯು ಸತಿಯ । ರಾಟವೆಲ್ಲ ಸಂಚಸನ್ನೆ । ನೋಟವೆಲ್ಲ ಕಾತ ಘಾತ । ಕೂಟವೆಲ್ಲ ವಂಚನೆ ॥ ಪಾಟುಗೆಟ್ಟು ಹೆಂಗಳರೊಡನೆ । ಕೋಟ ಲೆಗೊಳಗಾಗಬ್ಯಾಡಿ । ನೀಟುಗಾರತಿಯರ ಸಂಗ । ಬೂಟಕವೆಂದು ತಿಳಿ ಯಿರೋ ॥ ೧ ॥ ಸೋತೆನೆಂದು ವಿಟಗೆ ದೈನ್ಯ । ಮಾತನಾಡಿ ಮನ ಪುಟ್ಟಿಸಿ । ಕಾತರವ ಗೊಳಿಸಿ ಅವನ । ಮಾತಾಪಿತರನ್ನೆ ತೊರಿಸಿ । ಪ್ರೀತಿ ಬಡಿಸಿ ಹಣವ ಸೆಳದು । ರೀತಿಗೆಡಿಸಿ ಕಡೆಯಲವನ । ಕೋತಿಯಂತೆ ಮಾಡುತಿಪ್ಪರು । ನೀತಿಗೆಟ್ಟ ಸುದತಿಯರು ॥ ೨ ॥ ಧರಣಿಯ ಜನರೆಲ್ಲ ಕೇಳಿ । ಕರುಣವಿಲ್ಲ ನಾರಿಯರಿಗೆ । ಎರಳೆ ಕಂಗಳ ನಾರಿಯರೊಲುಮೆ । ನೀರಮೇಲಿನ ಬರಹವೂ । ಮರುಳುಗೊಂಡು ಮೋಸಗೊಳದೆ । ಬರಿದೆ ನೀವು ಕೆಡಲು ಬ್ಯಾಡಿ । ಗುರುಪುರಂದರವಿಠಲನ್ನ । ಚರಣವನ್ನು ಭಜಿ ಸಿರೋ ॥ ೩ ॥ ಶ್ರೀಃ ॥

## ೧೭. ರಾಗ ಶಂಕರಾಭರಣ, ಆದಿತಾಳ.

ಕಡುಕೃಪೆಯಿಂದಲಿ ಹರಿ ಒಲಿದವನಿಗೆ । ನಡೆನುಡಿ ಸತ್ಯವೆ ಸಾಕ್ಷಿ ॥ ದೃಢಭಕ್ತಿಯಿಂದಲಿ ಉಣಲಿಕ್ಕಿದವರಿಗೆ । ಷಡುರಸಾನ್ನವೇ ಸಾಕ್ಷಿ ॥ ॥ ೧ ॥ ಮಡದಿ ಮಕ್ಕಳಿಗೆ ಒಡವೆಯನೀಯದಗೆ । ಕಡುದಾರಿದ್ರ್ಯವೆ ಸಾಕ್ಷಿ ॥ ಪಡದೊಡವೆಯ ಧರ್ಮಕೆ ಈಯದವ ಬಾಯಿ । ಬಿಡುವದೆ ಪರರಿಗೆ ಸಾಕ್ಷಿ ॥ ೨ ॥ ಅನ್ನದಾನವ ಮಾಡಿದ ಮನುಜ ದಿ । ವ್ಯಾನ್ನ ಉಂಬುವದೆ ಸಾಕ್ಷಿ ॥ ಅನ್ನದಾನವ ಮಾಡದವನು ಕಡು । ದೈನ್ಯಬಡು ವದೆ ಸಾಕ್ಷಿ ॥ ೩ ॥ ಕನ್ಯಾದಾನವ ಮಾಡಿದವಗೆ ದಿವ್ಯ । ಹೆಣ್ಣಿನ

ಭೋಗವೆ ಸಾಕ್ಷಿ ॥ ಕನ್ಯಾದಾನವ ಮಾಡದವನು ಹೆಣ್ಣು । ಹೆಣ್ಣೆಂದು ವರಲುವದೆ ಸಾಕ್ಷಿ ॥ ೪ ॥ ವಸ್ತ್ರದಾನವ ಮಾಡಿದವಗೆ ದಿವ್ಯ । ವಸ್ತ್ರವ ಹೊದಿವದೆ ಸಾಕ್ಷಿ ॥ ವಸ್ತ್ರದಾನವ ಮಾಡದವಗೆ ನಿರ । ವಸ್ತ್ರವಾಗಿಹುದೆ ಸಾಕ್ಷಿ ॥ ೫ ॥ ಕಂಡ ಪುರುಷನಿಗೆ ಕಣ್ಣನಿಡುವಳಿಗೆ । ಗಂಡನ ಕಳೆವದೆ ಸಾಕ್ಷಿ ॥ ಪುಂಡುತನದಿ ಪರಸ್ತ್ರೀಯರಳುಪಿದವ । ಹೆಂಡರ ಕಳೆವದೆ ಸಾಕ್ಷಿ ॥ ೬ ॥ ಪರರಿಗೆ ಒಂದು ತಾನೊಂದುಂಬುವಗೆ । ಜ್ವರಗುಲ್ಮರೋಗವೆ ಸಾಕ್ಷಿ ॥ ಪರಿಪರಿಯಲಿ ಹಿರಿಯರ ದೂಷಿಸುವವ । ತಿರುದುಂಬುವದೆ ಸಾಕ್ಷಿ ॥ ೭ ॥ ಕ್ಷೇತ್ರದಾನವ ಮಾಡಿದ ಮನುಜಗೆ ಏಕ । ಛತ್ರಾಧಿಪತ್ಯವೆ ಸಾಕ್ಷಿ ॥ ಪಾತ್ರಾಪಾತ್ರವರಿತು ದಾನವ ಮಾಡಿದಗೆ ಸು । ಪುತ್ರರ ಪಡೆವುದೆ ಸಾಕ್ಷಿ ॥ ೮ ॥ ಭಕ್ತಿಯನರಿಯದ ಅಧಮನಿಗೊಂದು । ಕತ್ತಲೆಮನೆಯೆ ಸಾಕ್ಷಿ ॥ ಮುಕ್ತಿಯ ಪಡೆವರು ಪುರಂದರವಿಠಲನ । ಭಕ್ತರಾಗಿರುವದೆ ಸಾಕ್ಷಿ ॥ ೯ ॥ ಶ್ರೀಃ ॥

೧೮. ರಾಗ ಮುಖಾರಿ, ಝಂಪೆತಾಳ.

ಏನು ಮಾಡಿದರೇನು ಭವ ಹಿಂಗದು ॥ ದಾನವಾಂತಕ ನಿನ್ನ ದಯವಾಗದನಕಾ ॥ ಪಲ್ಲ ॥ ಅರುಣೋದಯದಲೆದ್ದು ಅತಿ ಸ್ನಾನಗಳ ಮಾಡಿ । ಬೆರಳೆಣಿಸಿದೆ ಅದರ ನಿಜವರಿಯದೆ ॥ ಚರಣ ಸಾಷ್ಟಾಂಗವನು ಮಾಡಿ ನಾ ದಣಿದೆನೊ । ಹರಿ ನಿನ್ನ ಕರುಣಾಕಟಾಕ್ಷವಾಗದನಕಾ ॥ ॥ ೧ ॥ ಶ್ರುತಿ ಶಾಸ್ತ್ರಪುರಾಣಗಳನೋದಿ ಬೆಂಡಾದೆ । ಅತಿ ಶೀಲಗಳನೆಲ್ಲ ಮಾಡಿ ದಣಿದೆ ॥ ಗತಿಯ ಪಡೆವೆನೆಂದು ಕಾಯ ದಂಡಿಸಿದೆನೊ । ರತಿಪತಿಪಿತ ನಿನ್ನ ದಯವಾಗದನಕಾ ॥ ೨ ॥ ಧ್ಯಾನವನು ಮಾಡಿದೆನು ಮೌನವನು ತಾಳಿದೆ ಮ । ಹಾನುಪುರುಷಾರ್ಥಕೆ ಮನವನಿಕ್ಕಿ ॥ ಅನಾಥಬಂಧು ಶ್ರೀಪುರಂದರವಿಠಲನಾ । ಧ್ಯಾನಿಸುವರೊಡಗೂಡಿ ನೆಲೆಗಾಣದನಕಾ ॥ ೩ ॥ ಶ್ರೀಃ ॥

೧೯. ರಾಗ ಪೂರ್ವಿ, ಅಟತಾಳ.

ಹುಟ್ಟಿದವೆರಡೇ ಜೀವನ । ಬಟ್ಟೆ ಬಯಲೊಳು ಬೇಲಿ ಅಡವಿಯ ಹಾರಿತು ॥ ಪಲ್ಲ ॥ ಆಕಸ್ಮಿತದ ಕಪಿ ದೇಶವ ನುಂಗಿತು । ಆಕಾಶವ

ನುಂಗಿತು ಅಳಿಲು ॥ ದೇಶದೊಳಿದ್ದಂಥ ಕೆರೆ ಭಾವಿ ಉದಕವಾ। ಪ್ರೋಕ್ಷನ ಮಾಡಿತೊಂದೆ ಇರುವು ॥ ೧ ॥ ಹಲ್ಲಿ ಹೋಗಿ ಕಾದ ಕಲ್ಲನು ನುಂಗಿತು। ಇಲಿ ಹೋಗೀರೇಳು ಲೋಕವ ನುಂಗಿತು ॥ ಆಲದ ಮರನ ಹಸು ಕೂಸು ನುಂಗಿತು। ಬಲ್ಲವರು ಹೇಳಿ ಈ ಸಂಸ್ಕೃತವಾ ॥ ೨ ॥ ಕಾಷ್ಟ ವೆಂಬೊದು ಹೋಗಿ ಪರ್ವತ ನುಂಗಿತು । ಕೃಷ್ಣನ್ನ ನುಂಗಿತು ಕಡಲೆ ಕಾಯಿ ॥ ದಿಟ್ಟಪುರಂದರವಿಠಲರೇಯನೊಬ್ಬ। ಸೃಷ್ಟಿಕರ್ತನಾಗಿ ಇಷ್ಟೂ ತಾ ಬಲ್ಲನು ॥ ೩ ॥ ಶ್ರೀಃ ॥

## ೨೦. ರಾಗ ಹಿಂದುಸ್ಥಾನಿದೇಶಿ, ಅಟತಾಳ.

ಆಡಹೋದಲ್ಲಿ ಮಕ್ಕಳು। ಆಡಿಕೊಂಬುವರು ನೋಡಮ್ಮ ॥ ನೋಡಿ ನೋಡಿ ಎನ್ನ ಮುಖವ । ನೋಡಿ ಕಣ್ಣು ಮಿಟುಕುವರಮ್ಮ ॥ ಪಲ್ಲ ॥ ದೇವಕಿ ಹೆತ್ತಳಂತೆ ವಸು । ದೇವನೆಂಬವ ಪಿತನಂತೆ ॥ ಕಾವಲಲ್ಲಿ ಹುಟ್ಟಿದೆನಂತೆ। ಮಾವಗಂಜಿಲ್ಲಿ ತಂದರಂತೆ ॥ ೧ ॥ ವಿಷವು ತುಂಬಿದ ಮೊಲೆಯನುಂಡು। ಆಸುರಿಯ ನಾ ಕೊಂದೆನಂತೆ ॥ ನಿಶಿಚರ ಶಕಟಾ ಸುರನ। ಶಿಶುಗಾಲಿಲೊರಸಿದೆನಂತೆ ॥ ೨ ॥ ನೀನೆನ್ನ ಹಡದಿಲ್ಲವಂತೆ। ನಾ ನಿನ್ನ ಮಗನಲ್ಲವಂತೆ ॥ ಧೇನು ಕಾಯುವರಿಲ್ಲವೆಂದು । ಸಾನುರಾಗದಿ ಸಲಹಿದಿಯಂತೆ ॥ ೩ ॥ ಕಿಚ್ಚ ನಾ ಗಡ ನುಂಗಿದೆನಂತೆ ॥ ವತ್ಸಾಸುರನ ಕೆಡಹಿದೆನಂತೆ ॥ ಕಚ್ಚಬಂದ ಕಾಳಿಂಗನ । ಕೊಚ್ಚಲು ಮಡುವ ಧುಮುಕಿದೆನಂತೆ ॥ ೪ ॥ ಹದ್ದು ಯೆನ್ನ ವಾಹನವಂತೆ । ಹಾವು ಯೆನ್ನ ಹಾಸಿಗೆಯಂತೆ ॥ ಕದ್ದು ಬೆಣ್ಣೆಯ ನಾ ತಿಂದೆನಂತೆ। ಮುದ್ದು ಪುರಂದರ ವಿಠಲನಂತೆ ॥ ೫ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೨೧. ರಾಗ ಪಂತುವರಾಳಿ, ಅಟತಾಳ.

ಹೊಯ್ಯೊ ಡಂಗುರವ । ಜಗ । ದಯ್ಯನಯ್ಯ ಶ್ರೀಹರಿಯಲ್ಲದಿಲ್ಲ ವೆಂದು ॥ ಪಲ್ಲ ॥ ಅಷ್ಟ ಐಶ್ವರ್ಯದ ಲಕುಮಿ ಅರಸನು । ಸೃಷ್ಟಿಸ್ಥಿತಿ

ಲಯ ಕರ್ತನೆಂದು ॥ ಘಟ್ಯಾಗಿ ತಿಳಿದು ಶ್ರೀಹರಿ ಎನ್ನದವರೆಲ್ಲ । ಭ್ರಷ್ಟ ರಾದರು ಇಹಪರಕೆ ಬಾಹ್ಯಾರೆಂದು ॥ ೧ ॥ ಹರನೆನ್ನದೆ ಹರಿಹರಿಯೆಂದ ಬಾಲನ । ಕರುಣವಿಲ್ಲದೆ ಪಿತ ಬಾಧಿಸಲು ॥ ತರಳನ ನುಡಿ ಕೇಳಿ ನರ ಮೃಗರೂಪದಿ । ಹಿರಣ್ಯಕನ ಸಂಹರಿಸಿದ ಮಹಿಮೆಯು ॥ ೨ ॥ ಕರಿಯು ಆದಿಮೂಲಗೆ ಕಾಯೆಂದು ಮೊರೆಯಿಡೆ । ಸುರನಿಕರವು ತೊಲಗದೆ ಇರಲು ॥ ಗರುಡನೇರಿ ಬಂದು ಮಕರಿಯ ಶೀಳಿ ಆ । ಕರಿರಾಜನ ಕಾಯ್ದ ಪರದೈವ ಹರಿಯೆಂದು ॥ ೩ ॥ ಸುರಪಗೊಲಿದು ಬಲಿ ಶಿರವ ತುಳಿಯ ಲಾಗ । ಸುರನದಿ ಸೃಜಿಸಲು ಹರಿಪಾದವ ॥ ಪರಮೇಷ್ಠಿ ಪವಿತ್ರೋದಕ ದಿಂದ ತೊಳೆಯಲು । ಹರ ತನ್ನ ಶಿರದಲ್ಲಿ ಧರಿಸಿದ ಮಹಿಮೆಯು ॥ ೪ ॥ ಗರಳಜ್ವಾಲೆಗೆ ರಾಮ ಶ್ರೀರಾಮ ರಾಮೆಂದು । ಸ್ಮರಣೆ ಮಾಡಲು ಉಮೆ ಯರಸನಿಗೆ ॥ ಕೊರಳು ಶೀತಳವಾಗಿ ಶಿತಿಕಂಠ ಗಿರಿಜೆಗೆ । ವರರಾಮ ಮಂತ್ರವನಿತ್ತ ಮಹಿಮೆಯು ॥ ೫ ॥ ಮಾನಸಲಿಂಗಪೂಜೆಗೆ ಮೆಚ್ಚಿ ಶಿವನು ತಾ । ಬಾಣನ ಬಾಗಿಲ ಕಾಯ್ದಿರಲು ॥ ದಾನವಾಂತಕ ಸಾವಿರ ತೋಳ ಕಡಿವಾಗ । ಮೌನದಿಂದೊಪ್ಪಿಸಿಕೊಟ್ಟನು ಶಿವನಂದು ॥ ೬ ॥ ಭಕ್ತಿಗೊಲಿದು ಶಿವ ಭಸ್ಮಗೆ ವರವಿತ್ತು । ಭಕ್ತನ ಬಾಧೆಯಿಂದೋಡುತಿರೆ ॥ ಯುಕ್ತಿಯಿಂದಲಿ ಅಸುರನ ಸಂಹರಿಸಿದ । ಶಕ್ತನಾದ ಶ್ರೀಹರಿಯಲ್ಲ ದಿಲ್ಲವೆಂದು ॥ ೭ ॥ ಹರಬೊಮ್ಮಮೊದಲಾದ ಸುರರಿಗೆ ದಶಶಿರ । ಸೆರೆಯ ಪಿಡಿದು ಸೇವೆಗೊಳುತಿರಲು ॥ ಶರಧಿಯ ದಾಟಿ ರಾವಣನ ಸಂಹರಿಸುತ । ಸುರರ ಲಜ್ಜೆಯ ಕಾಯ್ದ ಪರದೈವ ಹರಿಯೆಂದು ॥ ೮ ॥ ಜಗದಾಧಾರನು ಜಗವ ಪೊರೆವನೀತ । ಜಗವೆಲ್ಲ ಪ್ರಳಯದಿ ಮುಳುಗಿರಲು ॥ ಮಗು ವಾಗಿ ಆಲದೆಲೆಯ ಮೇಲೆ ಮಲಗಿರ್ದ । ಜಗಜನಕನು ಪುರಂದರವಿಠ ಲನೆಂದು ॥ ೯ ॥ ಶ್ರೀಃ ॥

## ೨೨. ರಾಗ ಪಂತುವರಾಳಿ, ಆದಿತಾಳ.

ಘಾಳಿಬಂದಕೈಯ್ಯಲ್ಲಿ ತೂರಿಕೊಳ್ಳಿರೋ । ಬಾಯ ಮುಚ್ಚಬ್ಯಾಡಿ ನಾರಾಯಣನ ನೆನೆಯಿರೋ ॥ ಪಲ್ಲ ॥ ನಿತ್ಯವಿಲ್ಲ ನೇಮವಿಲ್ಲ । ಮತ್ತೆ

ದಾನಧರ್ಮವಿಲ್ಲ ॥ ವ್ಯರ್ಥವಾಗಿ ಕೆಡದೆ ಪುರು । ಷೋತ್ತಮನ್ನ ನೆನೆಯಿರೋ ॥ ೧ ॥ ಕದ್ದು ಪುಸಿಯನಾಡಿ ಅಪರ । ಬುದ್ಧಿಯಿಂದ ಕೆಡಲುಬ್ಯಾಡಿ ॥ ಬುದ್ಧಿವಂತರಾಗಿ ಅನಿ । ರುದ್ಧನ್ನ ನೆನೆಯಿರೋ ॥ ೨ ॥ ಭಕ್ತಿ ಕೊಡುವ ಮುಕ್ತಿ ಕೊಡುವ । ಮತ್ತೆ ಸಾಯುಜ್ಯವ ಕೊಡುವ ॥ ಕರ್ತನಮ್ಮ ಪುರಂದರ । ವಿಠಲನ್ನ ನೆನೆಯಿರೋ ॥ ೩ ॥ ಶ್ರೀಃ ॥

## ೨೩. ರಾಗ ಪಂತುವರಾಳಿ, ಅಟತಾಳ.

ಅರಿಯರು ಮನುಜರರಿಯರು ॥ ಪಲ್ಲ ॥ ಸಿರಿವರ ಹರಿ ಸರ್ವ । ಸುರರೊಳುತ್ತಮನೆಂದು ॥ ಅನುಪಲ್ಲ ॥ ನಾರದಮುನಿ ಬಲ್ಲ ವಾರಿಜೋದ್ಭವ ಬಲ್ಲ । ಪರಾಶರನು ಬಲ್ಲ ಮನು ಬಲ್ಲನೂ ॥ ವೀರ ಭೀಷ್ಮನು ಬಲ್ಲ ಪಾರ್ವತಿ ಬಲ್ಲಳು । ಕಾರುಣಿಕ ಶ್ರೀಹರಿಯಲ್ಲದಿಲ್ಲವೆಂದು ॥ ೧ ॥ ಶಿವ ಬಲ್ಲ ಧ್ರುವ ಬಲ್ಲ ದ್ರೌಪದಿ ಬಲ್ಲಳು । ಅವನಿಪಾಲಕ ಜನಕನೃಪ ಬಲ್ಲನೂ ॥ ಯುವತಿಗೆ ಶಾಪವಿತ್ತ ಗೌತಮನು ಬಲ್ಲ । ಭವರೋಗವೈದ್ಯನು ಹರಿಯಲ್ಲದಿಲ್ಲವೆಂದೂ ॥ ೨ ॥ ದಿಟ್ಟ ಪ್ರಹ್ಲಾದ ಬಲ್ಲ ಕೆಟ್ಟ ಅಜಾಮಿಳ ಬಲ್ಲ । ದೃಷ್ಟಾಂತವನು ಕಂಡ ಭೃಗು ಬಲ್ಲನೂ ॥ ಕೊಟ್ಟ ಬಲಿಯು ಬಲ್ಲ ಸೃಷ್ಟೀಶ ಪುರಂದರ । ವಿಟ್ಠಲನೇ ಸರ್ವಶ್ರೇಷ್ಠ ದೈವವೆಂದೂ ॥ ೩ ॥

## ೨೪. ರಾಗ ಜುಂಜೋಟಿ, ರೂಪಕತಾಳ.

ವೆಂಕಟರಮಣ ಬೇಡಿಕೊಂಬೆ ಕೃಪೆಯ ಪಾಲಿಸೋ । ಕಿಂಕರ ಬ್ರಹ್ಮಾದಿವಂದ್ಯ ಮುಕ್ತಿ ತೋರಿಸೋ ॥ ಪಲ್ಲ ॥ ಸೃಷ್ಟೀಶ ನೀನುಂಡು ಮಿಕ್ಕಿದು ಎನಗೆ ಉಣಿಸೋ । ಪೊಂ । ಬಟ್ಟಲೊಳಗಿನ ಪಾಲು ಉಚ್ಛಿಷ್ಟ ಹಾಕಿಸೋ ॥ ಘಟ್ಯಾದ ರೊಟ್ಟಿ ತುಪ್ಪ ಸಕ್ಕರೆ ತಿನಿಸೋ । ಈ । ಹುಟ್ಟ ಬಾಹೊ ಕಷ್ಟನಿಂದ ಎನ್ನ ಬಿಡಿಸೋ ॥ ೧ ॥ ಶಿಷ್ಟಭಕ್ತರೊಳಗೆ ನೀ ಯೆನ್ನ ಕೂಡಿಸೋ । ಕಷ್ಟವ ಪರಿಹರಿಸಿ ಕೃಪೆಯ ಪಾಲಿಸೋ ॥ ಪಟ್ಟದ ರಾಣಿ ಘೋಳ್ಯಷ್ಟವುದ ಬಿಡಿಸೋ । ಈ । ಸೃಷ್ಟಿಯೊಳಗೆನ್ನ ನಿನ್ನ ದಾಸನೆನಿಸೋ ॥ ॥ ೨ ॥ ಕಿಟ್ಟಗಟ್ಟಿದ ಕಬ್ಬಿಣ ಪುಟಕೆ ಇಡಿಸೊ । ಚೊ । ಕ್ಕಟ್ಟಭಂಗಾರ

ವೊಳಗೆ ಎನ್ನ ಕೂಡಿಸೊ ॥ ಬೊಟ್ಟಿಗೆ ಉಂಗುರವ ಮಾಡಿ ಎನ್ನ ಸೇರಿಸೋ । ಪುರಂದರ । ವಿಟ್ಠಲ ನೀ ಎನ್ನ ಬಿಡವೆ ದಯದಿ ರಕ್ಷಿಸೋ ॥ ೩ ॥

೨೫. ರಾಗ ಕಾಂಬೋಧಿ, ಝಂಪೆತಾಳ.

ವಿಧಾತೃ ದೇವತೆಗಳೆಲ್ಲ ವಿಷ್ಣುವಿನ ಹಿಂದೆ । ಇದಕೆ ನಾ ಫಣಿ ಫಣಕ್ಕೈಯ್ಯಾಗೆ ಪಿಡಿವೆ ॥ ಪಲ್ಲ ॥ ಸಕಲ ತೀರ್ಥಗಳೆಲ್ಲ ಸಾಲಿಗ್ರಾಮದ ಹಿಂದೆ । ಸಕಲ ವೃಕ್ಷಗಳೆಲ್ಲ ಶ್ರೀತುಲಸಿ ಹಿಂದೆ ॥ ಪ್ರಕಟ ಗ್ರಂಥಗಳು ಭಾಗವತಧಿಂದೆ । ಲೋಕದೊಳಿಹ ಜಲವೆಲ್ಲ ಭಾಗೀರಥಿಯ ಹಿಂದೆ ॥ ॥ ೧ ॥ ವ ತಗಳೆಲ್ಲವು ಮಧ್ವಮತಸುಸಾರದ ಹಿಂದೆ ॥ ಇತರ ವರ್ಣಗಳೆಲ್ಲ ವಿಪ್ರರಾ ಹಿಂದೆ ॥ ವ್ರತಗಳೆಲ್ಲವು ಏಕಾದಶಿಯ ವ್ರತದ ಹಿಂದೆ । ಅತಿಶಯದ ದಾನಗಳು ಅನ್ನದಾನಧಿಂದೆ ॥ ೨ ॥ ಉತ್ತಮ ಗುಣಗಳೆಲ್ಲ ಔದಾರ್ಯ ಗುಣಧಿಂದೆ । ಮತ್ತೆ ಕರ್ಮಗಳೆಲ್ಲ ಮಜ್ಜನದ ಹಿಂದೆ ॥ ಇತ್ತ ದ್ರವ್ಯಗಳೆಲ್ಲ ವಿದ್ಯಾದ್ರವ್ಯದ ಹಿಂದೆ। ಚಿತ್ತಜನಯ್ಯ ಶ್ರೀಪುರಂದರಾ ವಿಠಲಾ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೨೬. ರಾಗ ಪೂರ್ವಿ, ಮಟ್ಟೆತಾಳ.

ಉದರವೈರಾಗ್ಯವಿದು ನಮ್ಮ । ಪದುಮನಾಭನಲ್ಲಿ ಲೇಶ ಭಕುತಿ ಇಲ್ಲ ॥ ಪಲ್ಲ ॥ ಉದಯಕಾಲದಲೆದ್ದು ಗಡಗಡ ನಡುಗುತ್ತ । ನದಿಯೊಳು ಮಿಂದೆನೆಂಧೇಳುತಲಿ ॥ ಮದಮತ್ಸರ ಕ್ರೋಧ ಒಳಗೆ ತುಂಬಿಟ್ಟು ಕೊಂಡು । ಬದಿಯಲ್ಲಿದ್ದವರಿಗಾಶ್ಚರ್ಯ ತೋರುವಂತೆ ॥ ೧ ॥ ಕಂಚುಗಾರರ ಬಿಡಾರದಂದದಲಿ । ಕಂಚು ಹಿತ್ತಾಳಿ ಪ್ರತಿಮೆ ನೆರಹಿ ॥ ಮಿಂಚಿಸಿನುತ ಬಹು ಜ್ಯೋತಿಗಳನೆ ಹಚ್ಚಿ । ವಂಚನೆಯಲಿ ಘನಪೂಜೆ ಮಾಡುವದು ॥ ೨ ॥ ಕರದಲ್ಲಿ ಜಪಮಣಿ ಬಾಯಲಿ ಮಂತ್ರವು । ಅರಿವೆಯ ಮುಸುಕು ಮೋರೆಗೆ ಹಾಕಿ ॥ ಪರಸತಿಯಳ ಗುಣ ಸ್ಮರಿಸುತ ಅನುದಿನ । ಪರಮ ವೈರಾಗ್ಯಶಾಲಿ ಎಂದೆನಿಸುವಂಥಾ ॥ ೩ ॥ ಬೂಟಕತನದಲ್ಲಿ ಬಹಳ ಭಕುತಿಮಾಡಿ । ದಿಟನೀತ ಸರಿಯಾರಿಲ್ಲೆನಿಸಿ ॥ ನಾಟಕಸ್ತ್ರೀ

ಯಂತೆ ಬಯಲ ಡಂಬವ ತೋರಿ । ಊಟದ ಮಾರ್ಗದ ಜ್ಞಾನವಿದ
ಲ್ಲದೆ ॥ ೪ ॥ ನಾನು ಎಂಬದು ಬಿಟ್ಟು ಜ್ಞಾನಿಗಳೊಳಗೂಡಿ । ಏನಾದರೂ
ಹರಿಪ್ರೇರಣೆಯೆಂದು ॥ ಧೇನಿಸಿ ಮೌನದಿ ಪುರಂದರವಿಠಲನ । ಕಾಣದೆ
ಮಾಡಿದ ಕಾರ್ಯಗಳೆಲ್ಲ ॥ ೫ ॥ ಶ್ರೀ ॥

೨೭. ರಾಗ ಕಾಂಬೋಧಿ, ಝಂಪೆತಾಳ.

ಸಕಲ ಗ್ರಹಬಲ ನೀನೆ ಸರಸಿಜಾಕ್ಷ । ನಿಖಿಳವ್ಯಾಪಕ ನೀನೆ ವಿಶ್ವ
ರಕ್ಷ ॥ ಪಲ್ಲ ॥ ರವಿ ಚಂದ್ರ ಬುಧ ನೀನೆ ರಾಹು ಕೇತೂ ನೀನೆ । ಕವಿ
ಗುರು ಶನಿಯು ಮಂಗಳನು ನೀನೆ ॥ ದಿವಾರಾತ್ರಿಯು ನೀನೆ ನವವಿಧಾ
ನನು ನೀನೆ । ಭವರೋಗಹರ ನೀನೆ ಭೇಷಜನು ನೀನೆ ॥ ೧ ॥ ಪಕ್ಷ
ಮಾಸವು ನೀನೆ ಪರ್ವಕಾಲವು ನೀನೆ । ನಕ್ಷತ್ರ ಯೋಗ ಕರಣಗಳು
ನೀನೆ ॥ ಅಕ್ಷಯದಿ ದ್ರೌಪದಿಯ ಮಾನವನು ಕಾಯ್ದೆ ನೀ । ಪಕ್ಷಿವಾಹನ
ಲೋಕರಕ್ಷಿಪನು ನೀನೆ ॥ ೨ ॥ ಋತುಕಾಲವು ನೀನೆ ವ್ರತದಿನಂಗಳು
ನೀನೆ । ಕ್ರತುವು ಸಂಧ್ಯಾನ ಸದ್ಗತಿಯು ನೀನೆ ॥ ಜಿತವಾಗಿ ಎನ್ನೊಡೆಯ
ಪುರಂದರವಿಠಲ । ಸ್ತುತಿಗೆ ಸಿಲುಕದ ಮಹಾಮಹಿಮ ನೀನೆ ॥ ೩ ॥

೨೮. ರಾಗ ಕಾಂಬೋಧಿ, ಝಂಪೆತಾಳ.

ಮರೆಯದಲೆ ಮನದಲ್ಲಿ ಸಿರಿವರನ ಚರಣವನು । ಸ್ಮರಿಸುವಂಥವ
ರಿಗೆ ನರರೆನ್ನ ಬಹುದೆ ॥ ಪಲ್ಲ ॥ ಮುರಹರಗೆ ಎರಗುವಾ ಶಿರವು ದ್ವಾರಕ
ಪುರವು । ಹರಿಕಥೆಯ ಕೇಳುವ ಕರ್ಣ ಗೋಕರ್ಣ ॥ ಬಿರಿದು ಪೊಗ
ಳುವ ಜಿಹ್ವೆ ಸುರರ ಕ್ಷೀರಾರ್ಣವು । ಸಿರಿವರನ ಪೂಜಿಪ ಕರವು ರಾಮೇ
ಶ್ವರವು ॥ ೧ ॥ ಸೃಷ್ಟೀಶ ನಿರ್ಮಾಲ್ಯ ಘ್ರಾಣಿಪ ನಾಸಿಕ ಕಾಶಿ । ವಿಷ್ಣುವಿನ
ನೋಡುವ ದೃಷ್ಟಿ ಶ್ರೀಮುಷ್ಟ ॥ ಅಷ್ಟಮದ ಜರಿದ ಕಾಯಯೋಧ್ಯಾ
ಮಧುರಾಪುರಾ ಶ್ರೀ । ಕೃಷ್ಣನ ಪಾಡುವ ಕಂಠವೇ ಶ್ರೀವೈಕುಂಠ ॥ ೨ ॥
ಧರೆಯೊಳಗೆ ಶ್ರೀಪುರಂದರವಿಠಲರೇಯನ । ಪರಮ ಭಾಗವತರ ಉದರ
ಬದರಿ ॥ ಪರಕೆ ನಡಿಸುವ ಜಂಘೆ ಹರಿವ ಗಂಗೋತ್ತುಂಗೆ । ಪರಿಯ
ಲೊಪ್ಪುವ ಅಂಗ ಮೇಲು ಶ್ರೀರಂಗ ॥ ೩ ॥ ಶ್ರೀ ॥

೨೯. ರಾಗ ಶಂಕರಾಭರಣ, ಅಟತಾಳ.

ನರಸಿಂಹನ ಪಾದ ಭಜನೆಯ ಮಾಡೊ ॥ ಪಲ್ಲ ॥ ನರಸಿಂಹನ ಪಾದ ಭಜನೆಯ ಮಾಡಲು । ದುರಿತ ಪರ್ವತವ ಖಂಡಿಸುವ ಕುಲಿಶದಂತೆ ॥ ॥ ಅನುಪಲ್ಲ ॥ ತರಳನ ಮೊರೆ ಕೇಳಿ ತವಕದಿಂದಲಿ ಬಂದು ॥ ದುರುಳನ ಕರುಳ ತನ್ನ ಕೊರಳಲ್ಲಿ ಧರಿಸಿದ ॥ ೧ ॥ ಸುರರೆಲ್ಲ ನಡುಗಲು ಸಿರಿದೇವಿ ಮೊರೆಯಿಡೆ ॥ ವರ ಕಂಭದಿಂದ ಬಂದ ವೈಕುಂಠಪತಿ ನಮ್ಮ ॥ ೨ ॥ ಹರಿವಿರಿಂಚಾದಿಗಳು ಕರವೆತ್ತಿ ಮುಗಿಯಲು ॥ ಪರಮ ಶಾಂತನಾದ ಪುರಂದರವಿಠಲ ॥ ೩ ॥ ಶ್ರೀಃ ॥

೩೦. ರಾಗ ಆನಂದಭೈರವಿ, ರೂಪಕತಾಳ.

ಎಂಥವನೆಂಥವನೆ । ರಂಗಯ್ಯ । ಎಂಥವನೆಂಥವನೆ ॥ ಪಲ್ಲ ॥ ಆಗಮವನು ತಂದಿತ್ತವನೆ । ಬಹು । ಬೇಗದಿ ಗಿರಿಯನ್ನು ಪೊತ್ತಿಹನೆ ॥ ಮೂಗಿನಿಂದ ಭೂಮಿಯನೆತ್ತಿದ । ಶಿಶು । ಕೂಗಲು ಕಂಭದಿಂದೊದಗಿದನೆ ಹರಿ ॥ ೧ ॥ ಧರಣಿಯ ಈರಡಿ ಮಾಡಿದನೆ । ಭೂ । ಸುರನಾಗಿ ಪರಶು ಧರಿಸಿದನೆ ॥ ಭರದಿ ಕೋಡಗ ಹಿಂಡ ಕೂಡಿದನೆ । ಫಣಿ । ಶಿರದಲ್ಲಿ ಕುಣಿಕುಣಿದಾಡಿದನೆ ರಂಗ ॥ ೨ ॥ ಉಟ್ಟಿದ್ದ ಬಟ್ಟೆ ಬಿಸುಟಿಹನೆ । ಬಹು । ದಿಟ್ಟ ತೇಜಿಯನೇರಿ ಮೆರದವನೆ ॥ ದುಷ್ಟರನೆಲ್ಲ ಸಂಹರಿಸಿದನೆ । ನಮ್ಮ । ದಿಟ್ಟ ಪುರಂದರವಿಠಲನೇ ಕೃಷ್ಣ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೩೧. ರಾಗ ಕೇತಾರಗೌಳ, ಅಟತಾಳ.

ಏನು ಬಂದ್ಯೋ ಜೀವವೇ ವ್ಯರ್ಥವಾಗಿ । ಜ್ಞಾನದಿಂದಲಿ ತಿಳಿದು ಪರಗತಿಯನು ಕೂಡು ॥ ಪಲ್ಲ ॥ ದಾನವ ಮಾಡಲಿಲ್ಲ ಧರ್ಮವ ಮಾಡಲಿಲ್ಲ । ದೀನನುಡಿಗಳಿಲ್ಲ ದಾಕ್ಷಿಣ್ಯವಿಲ್ಲ ॥ ಜ್ಞಾನಿ ದಾಸಜನರಾ ಸಂಗದೊಳಿರಲಿಲ್ಲ । ಮನ ನಿರ್ಮಲದಿ ಕ್ಷಣವು ಇರಲಿಲ್ಲ ॥ ೧ ॥ ಸತಿಪುರುಷರಾಗಿ ಸಂತೋಷದಿಂದಿರಲಿಲ್ಲ । ಯತಿಯಾಗಿ ತೀರ್ಥಯಾತ್ರೆಯ ಮಾಡ

ಲಿಲ್ಲ ॥ ಶ್ರುತಿಪುರಾಣಗಳನ್ನು ಕಿವಿಗೊಟ್ಟು ಕೇಳಲಿಲ್ಲ । ವ್ರತಿಕಾಲ ಬಂದು ದಿನ ವ್ಯರ್ಥ ಹೋಯ್ತಲ್ಲ ॥ ೨ ॥ ಉಂಡುಟ್ಟು ಸುಖವಿಲ್ಲ ಕಾಯ ಪರಿಣಾಮವಿಲ್ಲ । ಕೊಂಡು ಕೊಟ್ಟು ಪರಸೇವೆ ಬಿಡಲಿಲ್ಲ ॥ ದಂದುಗ ಸಂಸಾರ ಮಾಯಪಾಶಕೊಳಗಾದಿ । ತಂದೆ ಪುರಂದರವಿಠಲನ ನೆನೆ ಕಂಡ್ಯಾ ॥ ೩ ॥ ಶ್ರೀಃ ॥

## ೩೨. ರಾಗ ಆರಭಿ, ಅಟತಾಳ.

ಪಾಪಿಗಳೊಳಗೆಲ್ಲ ನಾನು ವೆಗ್ಗಳನೆಂದು ತಿಳಿಯಲಿಲ್ಲ । ದಯಾ । ರೂಪ ಕೃಪಾಂಬುಧಿ ನೀನಲ್ಲದಿಲ್ಲವೆಂದು ಅರಿಯಲಿಲ್ಲ ॥ ಪಲ್ಲ ॥ ಕಾಲ್ಗಳಿಂದಲಿ ತೀರ್ಥಯಾತ್ರೆಯ ನಾನಂತೂ ಮಾಡಲಿಲ್ಲ । ಹರಿ । ಪಾಲ್ಗಡಲ ಶಾಯಿ ನಿನ್ನ ದಿವ್ಯ ಕಥೆಯನ್ನು ಕೇಳಲಿಲ್ಲ ॥ ಕೂಳ್ಗಳಾಶೆಯಿಂದ ನಿನ್ನ ನೈವೇದ್ಯವನುಣ್ಣಲಿಲ್ಲ । ಇಂಥ । ನಾಲ್ಗಳ ಪಾಪದಿಂ ಯೆನ್ನ ಪಾಲಿಪ ಸ್ವಾಮಿ ನೀನೆಯಲ್ಲ ॥ ೧ ॥ ಕಣ್ಣುಗಳಿಂದ ನಿನ್ನಯ ದಿವ್ಯ ಮೂರ್ತಿಯ ನೋಡಲಿಲ್ಲ । ಶ್ರುತಿ । ಸನ್ನುತ ಮಹಿಮೆಯ ಅನುದಿನ ನಾನು ಕೊಂಡಾಡಲಿಲ್ಲ ॥ ಹೆಣ್ಣು ಹೊನ್ನು ಮೆಚ್ಚಿ ನಿನ್ನ ದಾಸರದಾಸ್ಯ ಮಾಡಲಿಲ್ಲ । ಮುನಿ । ಸನ್ನುತ ವರಪಾದಪದ್ಮಯುಗಂಗಳ ಸ್ಮರಿಸಲಿಲ್ಲ ॥ ೨ ॥ ಕರದಿಂದ ನಿನ್ನ ಸುಮೂರ್ತಿಪೂಜೆಯನ್ನು ಮಾಡಲಿಲ್ಲ । ಇಹ । ಪರ ಎರಡನು ಬಿಟ್ಟು ವಿಷಯದೊಳನುದಿನ ಬಾಳ್ವೆನಲ್ಲಾ ॥ ಗುರುಹಿರಿಯರ ಮಾತು ಕೇಳದೆ ನಾ ಬಲು ಕೆಟ್ಟೆನಲ್ಲಾ । ಹರಿ । ಪರಮಪುರುಷ ನೀನಲ್ಲದೆ ಜಗದೊಳು ಕಾವರಿಲ್ಲ ॥ ೩ ॥ ಹೊಟ್ಟೆಯಾಶೆಗಾಗಿ ದುಷ್ಟರ ಸೇವೆಗೆ ನಿಂತೆನಲ್ಲ । ಯಮ । ಕುಟ್ಟಿ ಕೊಲ್ಲಥಾಂಗೆ ನೀನೆ ರಕ್ಷಿಸಬೇಕು ಸಿರಿಯನಲ್ಲ ॥ ಅಷ್ಟೂ ತತ್ವೇಶರ ಸ್ವಾಮಿ ನೀನಲ್ಲದೆ ಬ್ಯಾರೆ ಇಲ್ಲ । ಇನ್ನು । ದುಷ್ಟಕೃತ್ಯಕೆ ಮನವೆರಗದಂದದಿ ಮಾಡು ಶ್ರೀಗೋಪಾಲಾ ॥ ೪ ॥ ಜಗದೊಳಗೆನ್ನಂಥಾ ಪಾಪಿಗಳಿನ್ನ್ಯಾರು ಇಲ್ಲವಲ್ಲ । ಹರಿ । ಸುಗುಣಪೂರ್ಣ ನಿನ್ನಂಥ ಕೃಪಾಂಬುಧಿ ಜಗದೊಳಿಲ್ಲ ॥ ನಿಗಮಗೋಚರ ನಿನ್ನ ಮಹಾಮಹಿಮೆಯ ನಾನು ತಿಳಿಯಲಿಲ್ಲ । ಜಗದ್ಗುರುವಿನ ಗುರುವೆ ಪುರಂದರವಿಠಲ ನೀನಲ್ಲದಿನ್ನಿಲ್ಲ ॥ ೫ ॥ ಶ್ರೀಃ ॥

### ೩೩. ರಾಗ ಧನಾಸಿ, ಆದಿತಾಳ.

ನಮ್ಮ ಭಾಗ್ಯ ದೊಡ್ಡದೋ ನಿಮ್ಮ ಭಾಗ್ಯ ದೊಡ್ಡದೋ । ಸಮ್ಮತಿ ಯಿಂದ ನಾವು ಸಾಟಿಮಾಡಿ ನೋಡುವ ಬನ್ನಿ ॥ ಪಲ್ಲ ॥ ಹೇಮ ಹೊನ್ನು ಹಣವು ಹೋದೀತೆಂದೊ ಭಯಗಳುಂಟು ನಿಮಗೆ ॥ ರಾಮನಾಮ ನಾಣ್ಯಕಿನ್ನು ಯಾರ ಅಂಜಿಕಿಲ್ಲವಯ್ಯ ॥ ೧ ॥ ಸರಕು ಧಾನ್ಯ ಬೆಲ್ಲ ತುಪ್ಪ ಸವದೀತೆಂಬೊ ಭಯಗಳುಂಟು ॥ ಹರಿನಾಮದ ವೃತ್ತಿಗಿನ್ನು ಯಾರ ಅಂಜಿಕಿಲ್ಲವಯ್ಯ ॥ ೨ ॥ ವ್ಯಾಪಾರ ಉದ್ಯೋಗಕಿನ್ನು ವ್ಯಾಕುಲ ದಿಂದಿರಲುಂಟು ॥ ಗೋಪಾಳದ ವೃತ್ತಿಗಿನ್ನು ಯಾರ ಅಂಜಿಕಿಲ್ಲವಯ್ಯ ॥ ॥ ೩ ॥ ಕಡಗ ಕಂಠ ಮಾಲೆಗಿನ್ನು ಕಳ್ಳರ ಅಂಜಿಕೆಯುಂಟು ॥ ಅಡವಿ ತುಲಸಿಮಾಲೆಗಿನ್ನು ಯಾರ ಅಂಜಿಕಿಲ್ಲವಯ್ಯ ॥ ೪ ॥ ನಿಮ್ಮ ಭಾಗ್ಯ ಲಕ್ಷ್ಮಿಯು ನಮ್ಮ ಭಾಗ್ಯ ನಾರಾಯಣನಾಜ್ಞಳು ॥ ನಮ್ಮೊಡೆಯ ಪುರಂದರವಿಠಲ ಯೆಮ್ಮ ನಿಮ್ಮ ಸಂರಕ್ಷಿಪನು ॥ ೫ ॥ ಶ್ರೀಃ ॥

### ೩೪. ರಾಗ ಪಂತುವರಾಳಿ, ಅಟತಾಳ.

ಕೂಸು ಕಂಡೆವಮ್ಮ । ಅಮ್ಮ ನಿಮ್ಮ । ಕೂಸು ಕಂಡೆವಮ್ಮ ॥ ಪಲ್ಲ ॥ ಕಾಸಿಗೆ ವೀಸವ ಬಡ್ಡಿ ಘಳಿಸಿಕೊಂಡು ॥ ಶೇಷಗಿರಿಯ ಮೇಲೆ ವಾಸ ವಾಗಿದ್ದನೆ ॥ ೧ ॥ ವಂಚಿಸಿ ಬಲಿಯೊಳ್ ಪ್ರಪಂಚವೆಲ್ಲ ಕೆಳದು ॥ ಕಂಚಿ ಪಟ್ಟಣದಿ ಬಲ್ ಮಿಂಚಾಗಿದ್ದನೆ ॥ ೨ ॥ ಗುಡ್ಡ ಬೆರಳೊಳೆತ್ತಿ ದೊಡ್ಡಿ ಗೋವ್ಗಳ ಕಾಯ್ದು ॥ ಒಡ್ಡಿ ಜಗನ್ನಾಥ ಗಿಡ್ಡಾಗಿದ್ದನೆ ॥ ೩ ॥ ದುಡುಕು ಮಾಡಿ ಹಾಲುಮಡಿಕೆಗಳ ಒಡೆದು ॥ ಹಡಗನೇರಿ ಬಂದು ಉಡುಪಿಲಿ ಇದ್ದನೆ ॥ ೪ ॥ ಮಂಗಳ ರೇಖೆ ಪಾದಂಗಳುಳ್ಳ ನಿಮ್ಮ ॥ ರಂಗ ಪುರಂದರ ವಿಠಲ ಶ್ರೀಕೃಷ್ಣನೆ ॥ ೫ ॥ ಶ್ರೀಃ ॥

### ೩೫. ರಾಗ ಕಾಂಬೋಧಿ, ಝಂಪೆತಾಳ.

ಬದುಕಿದೆನು ಬದುಕಿದೆನು ಭವ ಹಿಂಗಿತು । ಪದುಮನಾಭನ ಪಾದದೊಲುಮೆ ಎನಗಾಯಿತು ॥ ಪಲ್ಲ ॥ ಮುಕ್ತರಾದರು ಎನ್ನ

ನೂರೊಂದು ಕುಲದವರು । ಮುಕ್ತಿಮಾರ್ಗಕೆ ಯೋಗ್ಯ ಸ್ನಾನಾದೆನು ॥ ಮುಕ್ತಿದಾಯಕನ ಭಕ್ತಿಗೆ ಮನವು ನೆಲಸಿತು । ವ್ಯಕ್ತವಾಯಿತು ನಾಲಿಗೆಯೊಳು ಹರಿನಾಮಾ ॥ ೧ ॥ ಹರಿಯ ತೀರ್ಥ ಪ್ರಸಾದವಿಂದೆನಗೆ ದೊರಕಿತು । ಹರಿಕಥಾಮೃತವೆನ್ನ ಕಿವಿಯೊಳಾಯ್ತು ॥ ಹರಿದಾಸರು ಎನ್ನ ಬಂಧುಬಳಗಾಯಿತು । ಹರಿಮುದ್ರೆ ಎನಗಾಭರಣವಾಯಿತೂ ॥ ೨ ॥ ಹಿಂದೆನ್ನ ಸಂತತಿಗೆ ಸಕಲ ಸಾಧನವಾಯ್ತು । ಮುಂದೆನ್ನ ಜನ್ಮವು ಸಫಲವಾಯ್ತು ॥ ತಂದೆ ಪುರಂದರವಿಠಲನೆಂದೆಂಬ ಪರದೈವ । ಬಂದು ಹೃದಯದಲಿ ನೆಲೆಯಾಗಿ ನಿಂತಾ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೩೬. ರಾಗ ಕಾಂಬೋಧಿ, ಝಂಪೆತಾಳ.

ಶಕ್ತನಾದರೆ ನೆಂಟರೆಲ್ಲ ಹಿತರು । ಅ । ಶಕ್ತನಾದರೆ ಆಪ್ತ ಜನರೆ ವೈರಿಗಳು ॥ ಪಲ್ಲ ॥ ಕಮಲಾರ್ಕರಿಗೆ ನಿರತ ಕಡುನೆಂಟತನವೆಂದು । ಕಮಲ ಜಲದೊಳಗೆ ತಾನಾಡುತಿರಲೂ ॥ ಕ್ರಮಗೆಟ್ಟು ನೀರಿಂದ ತಡಿಗೆ ಬೀಳಲು ರವಿಯ । ಅಮಿತ ಕಿರಣಗಳಿಂದ ಕಂದಿಹೋಗುವದೂ ॥ ೧ ॥ ವನವ ಸುಡುವಾಗ ಅಗ್ನಿಗೆ ವಾಯು ತಾ ಸೋಂಕೆ । ಘನ ಪ್ರಜ್ವಲಿಸುತಿಹುದು ಗಗನಕಡರೀ ॥ ಮನೆಯೊಳಿಹ ದೀಪಕೆ ಮಾರುತನು ಸೋಂಕಲು । ಘನಶಕ್ತಿ ಕ್ಷಯಗೊಂಡು ಕುಂದಿಹೋಗುವದೂ ॥ ೨ ॥ ಭುಜಗವರಶಾಯಿ ಪುರಂದರವಿಠಲ ಒಲಿದಿರಲು । ಭಜಿಪರಿಗೆ ಸರ್ವಜನರೆಲ್ಲ ಹಿತರೂ ॥ ಗಜವ ಕಾಯ್ದ ಹರಿಯು ಕರುಣ ತಪ್ಪಿದ ಮೇಲೆ । ಮೂಜಗದಿ ಮೊರೆಯಿಡಲು ಕಾಯ್ವರ್ಯಾರೂ ॥ ೩ ॥ ಶ್ರೀಃ ॥

## ೩೭. ರಾಗ ಕಾಂಬೋಧಿ, ತ್ರಿಪುಟತಾಳ.

ಎಂದೆಂದು ನಿನ್ನ ಪಾದವೆ ಗತಿ ಎನಗೆ ಗೋ । ವಿಂದ ಬಾರಯ್ಯಾ ಎನ್ನ ಹೃದಯ ಮಂದಿರಕೆ ॥ ಪಲ್ಲ ॥ ಮೊದಲಿಂದ ಬರಬಾರದೆ ನಾ ಬಂದೆ । ಇದರಿಂದ ಗೆದ್ದು ಪೋಗುವದು ಕಾಣೆ ಮುಂದೆ ॥ ತುದಿ ಮೊದ

ಲಿಲ್ಲದೆ ಪರರಿಂದ ನೊಂದೆ । ಪದುಮನಾಭನೆ ತಪ್ಪು ಕ್ಷಮೆಮಾಡೊ ತಂದೆ ॥ ೧ ॥ ಹೆಣ್ಣು ಹೊನ್ನು ಮಣ್ಣಿನಾಶೆಗೆ ಬಿದ್ದು । ಪುಣ್ಯಪಾಪವನು ನಾ ತಿಳಿಯದೆ ಇದ್ದು ॥ ಅನ್ಯಾಯವಾಯಿತು ಇದಕೇನು ಮದ್ದು ॥ ನಿನ್ನ ಧ್ಯಾನ ಎನ್ನ ಹೃದಯದೊಳಿದ್ದು ॥ ೨ ॥ ಹಿಂದೆ ನಾ ಮಾಡಿದ ಪಾಪವ ಕಳೆಯೊ । ಮುಂದೆನ್ನ ಜನ್ಮ ಸಫಲಮಾಡಿ ಪೊರೆಯೊ ॥ ತಂದೆ ಶ್ರೀಪುರಂದರವಿಠಲನ್ನ ನೆರೆಯೊ । ಎಂದೆಂದಿಗಾನಂದ ಸುಖವನ್ನೆ ಗರೆಯೊ ॥ ೩ ॥

### ೩೮. ರಾಗ ಸೌರಾಷ್ಟ್ರ, ಅಟತಾಳ.

ಕೇಶವ ಮಾಧವ ಗೋವಿಂದ ವಿಠಲೆಂಬ । ದಾಸಯ್ಯ ಬಂದ ಕಾಣೆ ॥ ವೇಷಡಂಬಕದಿಂದ ಎಲ್ಲರೊಳ್ ನರನಾದ । ದಾಸಯ್ಯ ಬಂದ ಕಾಣೆ ॥ ॥ ಪಲ್ಲ ॥ ಖಳನು ವೇದವನೊಯ್ಯೆ ಪೊಳವ ಕಾಯನಾದ । ದಾಸಯ್ಯ ಬಂದ ಕಾಣೆ । ನಳಿನನಾಭ ತಾನೆ ಗಿರಿಯನ್ನು ಪೊತ್ತಿದ್ದ । ದಾಸಯ್ಯ ಬಂದ ಕಾಣೆ ॥ ಧರೆಯ ಕದ್ದಸುರನ ಕೋರೆದಾಡೆಲಿ ಕೊಂದ । ದಾಸಯ್ಯ ಬಂದ ಕಾಣೆ । ಭರದಿ ಕಂಭದಿ ಬಂದು ಅಸುರನ್ನ ಶೀಳಿದ । ದಾಸಯ್ಯ ಬಂದ ಕಾಣೆ ॥ ೧ ॥ ಬಲಿಯ ದಾನವ ಬೇಡಿ ನೆಲನ ಅಳೆದು ಬಂದ । ದಾಸಯ್ಯ ಬಂದ ಕಾಣೆ । ಛಲದಿಂದ ಕ್ಷತ್ರಿಯರ ಕುಲವ ಸಂಹರಿಸಿದ । ದಾಸಯ್ಯ ಬಂದ ಕಾಣೆ ॥ ಲಲನೆಯನೊಯ್ಯೆ ತಾ ತಲೆಹತ್ತನ ತರಿದ । ದಾಸಯ್ಯ ಬಂದ ಕಾಣೆ । ಬಲದಿಂದ ಕಂಸನ ಬಲವ ಸಂಹರಿಸಿದ । ದಾಸಯ್ಯ ಬಂದ ಕಾಣೆ ॥ ೨ ॥ ಪುಂಡತನದಿ ಪೋಗಿ ಪುರವನುರುಪಿ ಬಂದ । ದಾಸಯ್ಯ ಬಂದ ಕಾಣೆ । ಲಂಡರ ಎದುರಿಲಿ ತುರಗವನೇರಿದ । ದಾಸಯ್ಯ ಬಂದ ಕಾಣೆ ॥ ಹಿಂಡು ವೇದಗಳೊಳು ಅರಸಿ ಕಾಣಲು ಸಿಕ್ಕ । ದಾಸಯ್ಯ ಬಂದ ಕಾಣೆ । ಪಾಂಡುರಂಗ ನಮ್ಮ ಪುರಂದರವಿಠಲ । ದಾಸಯ್ಯ ಬಂದ ಕಾಣೆ ॥ ೩ ॥ ಶ್ರೀಃ ॥

### ೩೯. ರಾಗ ಸೌರಾಷ್ಟ್ರ, ಅಟತಾಳ.

ಹತ್ತಿಗಿಡದ ಕೊನೆ ಹಗೆಯಾಗಿ ಬಿಡದ ಮೇ । ಲಿನ್ನೇನಿನ್ನೇನು । ಸ ॥ ಮಸ್ತರು ಹಗೆಯಾಗಿ ಸಾಧಿಸಿದ ಮೇ । ಲಿನ್ನೇನಿನ್ನೇನೂ ॥ ಪಲ್ಲ ॥

ಗಂಡುಮಕ್ಕಳೆಂಬೋರು ಪುಂಡರಾದ ಮೋ । ಅನ್ನೇನಿನ್ನೇನು ॥ ಬಂಡು ಸಂಸಾರವು ಬಯಲಿಗೆ ಬಿದ್ದ ಮೋ । ಅನ್ನೇನಿನ್ನೇನೂ ॥ ೧ ॥ ನಗುವರ ಮುಂದಿಷ್ಟು ತಗಲಿ ಬಿದ್ದ ಮೋ । ಅನ್ನೇನಿನ್ನೇನು ॥ ನಗುವರಿಗೆ ನಾಲು ನಾಲಿಗೆಯಾದ ಮೋ । ಅನ್ನೇನಿನ್ನೇನೂ ॥ ೨ ॥ ಮಾಡಿದ ಗಣಪತಿ ಮಂಗನಾದ ಮೋ । ಅನ್ನೇನಿನ್ನೇನು ॥ ಊಡಿದ ಮಕ್ಕಳು ಬಿಡದೆ ಕಚ್ಚಿದ ಮೋ । ಅನ್ನೇನಿನ್ನೇನೂ ॥ ೩ ॥ ಭಾವಿ ತೋಡಿದರೆ ಬೇತಾಳ ಹೊರಟ ಮೋ । ಅನ್ನೇನಿನ್ನೇನು ॥ ಕಾವ ಬೇಲಿ ಎದ್ದು ಹೊಲವ ಮೇದ ಮೋ । ಅನ್ನೇನಿನ್ನೇನೂ ॥ ೪ ॥ ಹಾರೈಸಿದೆಲ್ಲವು ಹಳವಂಡವಾದ ಮೋ । ಅನ್ನೇನಿನ್ನೇನು ॥ ಆಲೈಸಿ ಕೇಳಯ್ಯ ಪುರಂದರವಿಠಲ । ಇನ್ನೇನಿನ್ನೇನೂ ॥ ೫ ॥ ಶ್ರೀಃ ॥

೪೦. ರಾಗ ಪಂತುವರಾಳಿ, ಅಟತಾಳ.

ಮಾಯವಾದಿ ಗಂಡನೊಲ್ಲೆನೇ । ಅವನ । ಮಾಯರಾಣಿ ಪೂಜೆ ಮಾಡಲಾರೆನಕ್ಕ ॥ ಪಲ್ಲ ॥ ಹೆಗಲ ಹಶಿಬಿಯೊಳಗಿಟ್ಟ ಮಡಿಯನುಟ್ಟು । ಗಗನದಿಂದಿಳಿದ ಗಂಗೆಯ ತೀರದಿ ॥ ಅಗಿದು ಮೃತ್ತಿಕೆಯ ಸರ್ವಾಂಗಕ್ಕೆ ಲೇಪಿಸ್ಯೆ । ನಗೆ ಮೈಯ ತೊಳೆಯಲೀಸನೆ ಭ್ರಷ್ಟ ಖೋಡಿ ॥ ೧ ॥ ನಿಷ್ಠೆಯಿಂದಲಿ ಸಾಲಿಗ್ರಾಮ ಶಿಲೆಯ ಸಂ । ಪುಷ್ಟದೊಳಿರಿಸಿ ಪೂಜಿಸು ಎಂದರೆ ॥ ಭ್ರಷ್ಟರು ಕೊಂಬುವ ಮದ್ಯಪಾನವ ಮಾಡಿ । ಜೆಟ್ಟಿದೇವಿಯ ಪೂಜೆ ಮಾಡೆಂಬೊನಕ್ಕ ॥ ೨ ॥ ಎಳೆ ತುಳಸಿ ಗಂಗೆ ಅಗ್ರೋದಕದಿ ನಿ । ರ್ಮಲವಾಗಿ ಪೂಜೆಯ ಮಾಡೆಂದರೆ ॥ ಬಿಳಿ ನೀರ ಕುಡಿದು ಬತ್ತಲೆ ಬೇವು ಉಟ್ಟು । ಹುಳಿ ಮೂಲಂಗೀರುಳ್ಳಿ ತಿಂಬುವನೆ ಖೋಡಿ ॥ ೩ ॥ ಹರಿದಿನದುಪವಾಸ ಇರುಳಲಿ ಜಾಗರ । ವರಭಕುತಿಯಲಿ ಆಚರಿಸೆಂದರೆ ॥ ಹುರುಳಿಗುಗ್ಗರಿ ಮುಕ್ಕಿ ಮೇಲೆ ಮಜ್ಜಿಗೆ ಕುಡಿದು । ಹಿರಿಯ ಹೆಬ್ಬುಲಿಯಂತೆ ನಿದ್ರಿಪ ಖೋಡಿ ॥ ೪ ॥ ಸೃಷ್ಟಿಗಧಿಕನಾದ ವರದ ಶ್ರೀಪುರಂದರ । ವಿಟ್ಠಲನ ಭಜನೆ ಮಾಡೆಂದರೆ ॥ ಮುಷ್ಟಿಭಂಗಿಯ ತಿಂದು ಲಿಂಗಪೂಜೆಯ ಮಾಡಿ । ಇಷ್ಟ ಸಲ್ಲಿಸುತೇನೆಂದ್ಹೆಳೆಯುವ ಖೋಡಿ ॥ ೫ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೪೧. ರಾಗ ಪೂರ್ವಿ, ಅಟತಾಳ.

ನಂಬಿಯದಿರಲೆ ಮನವಿಲ್ಲಿ । ಯಮ । ಪುರಿಗೆ ಒಯ್ದು ಬಾಧಿಸುತ್ತಿಹರಲ್ಲಿ ॥ ಪಲ್ಲ ॥ ಪರನಾರಿಯರ ಸಂಗವಿಲ್ಲಿ । ಉಕ್ಕು । ಬರದ ಸತಿಯರ ತಕ್ಕೈಸುವರಲ್ಲಿ ॥ ಗುರುಹಿರಿಯರ ನಿಂದ್ಯವಿಲ್ಲಿ । ಬಾಯೊ । ಳಿರದು ಸೀಸವ ಕಾಸಿ ಹೊಯಿಸುವರಲ್ಲಿ ॥ ೧ ॥ ಉಂಡ ಮನೆಯಕೊಂಬದಿಲ್ಲಿ । ಎದೆ । ಗುಂಡಿಗೆಯನು ಶೀಳಿ ಕೊಲುತಿಹರಲ್ಲಿ ॥ ಗಂಡನ ದಣಿಸುವದಿಲ್ಲಿ । ಯಮ । ಕುಂಡದೊಳಗೆ ಹಾಕಿ ಕುದಿಸುವರಲ್ಲಿ ॥ ೨ ॥ ಚಾಡಿಗಳ್ಹೇಳುವದಿಲ್ಲಿ । ನುಡಿ । ದಾಡುವ ನಾಲಿಗೆ ಕೀಳುವರಲ್ಲಿ ॥ ಬೇಡಿದರಗೆ ಧರ್ಮಕ್ಕಿಲ್ಲಿ । ಇದ್ದು । ನೀಡದಿರಲು ನರಕಕೆ ನೂಕ್ವರಲ್ಲಿ ॥ ೩ ॥ ಪುಸಿ ಠಕ್ಕು ಠವಳಿಗಳಿಲ್ಲಿ । ಕಟ್ಟಿ । ಎಸೆದು ಕೊಲ್ಲುವರೊ ನಿನ್ನವರು ಕೇಳಲ್ಲಿ ॥ ಅಶನ ಪ್ರಭೇದಗಳಿಲ್ಲಿ । ಮಾಡೆ । ಬಿಸಿಯ ಕೆಂಡವ ತಂದು ತಿನಿಸುವರಲ್ಲಿ ॥ ॥ ೪ ॥ ಸಿರಿಮದದೊಳಗಿಹುದಿಲ್ಲಿ । ಸೊಕ್ಕು । ಮುರಿದು ನಿನ್ನ ಹಲ್ಲ ಕಳಚುವರಲ್ಲಿ ॥ ಪುರಂದರವಿಠಲನ ಇಲ್ಲಿ । ಬಿರಿಯೆ । ಸ್ಥಿರವಾದ ಮುಕ್ತಿ ಪಡಕೊಂಬುವರಲ್ಲಿ ॥ ೫ ॥ ಶ್ರೀಃ ॥

## ೪೨. ರಾಗ ಕೇತಾರಗೌಳ, ಅಟತಾಳ.

ಶೆರಗ ಬಿಡೊ ರಂಗ ಶೆರಗ ಬಿಡೊ । ಕರವ ಮುಗಿವೆನೊಮ್ಮೆ ಶೆರಗ ಬಿಡೊ ॥ ಪಲ್ಲ ॥ ಅತ್ತೆ ಕಂಡರೆ ಎನ್ನ ಹತ್ತಿರ ಶೀರಳು ಹರಿಯೆ ॥ ಚಿತ್ತದೊಲ್ಲಭ ಯೆನ್ನ ಶೆರಗ ಬಿಡೊ ॥ ೧ ॥ ಮಾವ ಕಂಡರೆ ಎನ್ನ ಜೀವ ಬಿಡನು ಹರಿಯೆ ॥ ಜೀವದೊಲ್ಲಭ ಎನ್ನ ಶೆರಗ ಬಿಡೊ ॥ ೨ ॥ ಗಂಡ ಕಂಡರೆ ಎನ್ನ ಗುಂಡಿಗಿಕ್ಕುವ ಹರಿ ॥ ಪುಂಡರೀಕಾಕ್ಷ ಪುರಂದರವಿಠಲ ಬಿಡೋ ॥ ೩ ॥ ಶ್ರೀಃ ॥

## ೪೩. ಶ್ರೀರಾಗ, ಅಟತಾಳ.

ನೀನಿರುಳಿಲ್ಲಿದ್ದಿ ಹೇಳಯ್ಯ । ಶ್ರೀನಿವಾಸ ಮೂರುತಿ ಗೋವಳರಾಯ ॥ ಪಲ್ಲ ॥ ಪಾಲಸಾಗರದಿ ಹಾವಿನ ಮ್ಯಾಲೆ । ತಳಿ । ರಾಲದೆಲೆಯ ಮ್ಯಾಲೆಶೋದೆಯ್ಲು ॥ ತೋಳಿನ ಮ್ಯಾಲೆ ಗೋಪಿಯರಲಿ ಕ್ರತು ॥ ಶಾಲೆ

ಯೊಳರಸಿ ನೋಡಿದರಿಲ್ಲ ॥ ೧ ॥ ಕಡವಲ್ಲಿ ತರುವಿಂಡುಗಳಲ್ಲಿ । ಸತ್ಯ । ನುಡಿವಲ್ಲಿ ಎಡೆಗಾಣಿಸದಲ್ಲಿ ॥ ಮಡದಿ ರುಗ್ಮಿಣಿ ಜಾಂಬವತೀರಲ್ಲಿ । ಸಿ । ನ್ನಡಿಗರಸಿ ನೋಡಿದರಿಲ್ಲ ॥ ೨ ॥ ಏಕಾದಶಿಯ ಜಾಗರದಲ್ಲಿ । ಪುಣ್ಯ । ಲೋಕಪಾವನ ಭಾಗವತರಲ್ಲಿ ॥ ವ್ಯಾಖ್ಯಾನ ತೆಗೆದು ನೋಡಿದರಿಲ್ಲ । ಜಗ । ದೇಕಪುರಂದರವಿಠಲಾ ॥ ೩ ॥ ಶ್ರೀಃ ॥

## ೪೪. ರಾಗ ಪೂರ್ವಿ, ಅಟತಾಳ.

ನೋಡ ಬನ್ನಿರೋ ಜನರು । ಶ್ರೀಕೃಷ್ಣನ । ಜೋಡು ದಿವಿಟಿಗೆ ಸೇವೆ ॥ ॥ ಪಲ್ಲ ॥ ನೋಡಿಯೆ ನಮ್ಮಯ ಮನದ ಇಷ್ಟಾರ್ಥವ । ಬೇಡಿ ಶರಣು ಪೋಗುವ ಪದಯುಗವ ॥ ಅನುಪಲ್ಲ ॥ ಅಂಜಿಕೆ ಪರಿಹರ ಅಸುರ ಭಂಜನನಾದ । ಕಂಜಾಕ್ಷ ಶ್ರೀಕೃಷ್ಣನಿದಿರೊಳು ॥ ನಿಂದು ಸಂಜೆಯ ವೇಳ್ಯದಿ ರಾಜಿಪ ರಜತದ । ಪಂಜಿಸೇವೆಯ ಕರಾಂಜಲಿಯನೆ ಮುಗಿದು ॥ ೧ ॥ ನೆರದ ಜನರ ಮುಂದೆ ಗುರುರಾಯ ತಾ ಬಂದು । ಕರವ ಮುಗಿದು ನಿಂದಿರುತಿಪ್ಪ ಸಮಯದಿ ॥ ಪರಿಪರಿ ವಿನಿಯೋಗದವರೆಲ್ಲ ತಾವ್ತಮ್ಮ । ಸರತಿ ತಪ್ಪದೆ ಬಂದು ಇರುತಿಪ್ಪ ಸೊಬಗನು ॥ ೨ ॥ ಪಂಚಮುಖದ ಜ್ಯೋತಿ ಬೆಳಗಲು ಎಡಬಲ । ಸಂಚರಿಸುವ ಪೊಮ್ಮರಿ ಮೃಗಚಾರಿಯು ॥ ಕಾಂಚನಮಯದ ಕಟ್ಟಿಗೆ ಕೋಲ ಹಸುರಿನ । ಲಾಂಛನವಾದಗೆ ಹಾಕುವ ಪರಿಯು ॥ ೩ ॥ ಬಟ್ಟಲವೀಳ್ಯ ವಿಶಿಷ್ಟ ಲಾಜಾಕ್ಷತೆ । ಪುಟ್ಟ ಕದಳಿ ಬೆಲ್ಲ ಕತ್ತುರಿಗಳಿಂದ ॥ ಕೃಷ್ಣರಾಯನ ಮುಂದಿಟ್ಟು ಸಮರ್ಪಿಸಿ ಹೊ । ತ್ತಿಟ್ಟ ಆರತಿ ಶ್ರೀಪ್ಮರೆತ್ತುವದನ್ನು ॥ ೪ ॥ ದೇವದೇವೋತ್ತಮ ದೇವೇಶನೆನುತಲಿ । ಭಾವಶುದ್ಧದಿ ಭಕ್ತರು ಸ್ತುತಿಗೈಯುತ್ತ ॥ ಗೋವಳರಾಯನೆ ಜಯಶೀಲನಾಗೆಂದು । ಗೋವಿಂದ ಎನುತಲೆ ಘೋಷ ಮಾಳ್ಪದನು ॥ ೫ ॥ ಭಯನಿವಾರಣ ಭಕ್ತದುರಿತ ನಿವಾರಣ । ಹರಿ ಕೃಷ್ಣ ಪರದೈವ ಪರಪುರುಷನೆಂದು ॥ ಸ್ಮರಣೆಯಿಂದಲಿ ಮನವೆರಸಿ ವಂದಿಸಿ ತ । ಚ್ಚರಣವ ನೋಡಿಯೆ ಕರುಣ ಪಡೆವರಿ ॥ ೬ ॥ ಮಧ್ವರಾಯರ ಮತಕದ್ವೈತನಾಗಿಯೆ । ಸಿದ್ಧವಾಗಿಹ ಫಲವೆದ್ದು ತೋ

ರಿದ ತೆರ ॥ ಉದ್ಧರಿಸುವೆನೆಂಬ ಪುರಂದರವಿಠಲ । ಮುದ್ದು ಶ್ರೀಕೃಷ್ಣನ ಮೂರುತಿ ಮಹಿಮೆಯು ॥ ೭ ॥ ಶ್ರೀಃ ॥

೪೫. ರಾಗ ಪಂತುವರಾಳಿ, ಅಟತಾಳ.

ಸಾಕು ಸಂಸಾರ ಸಜ್ಜಾಗಿಲ್ಲ ಒಲ್ಲೆ ಒಗತನವ ॥ ಪಲ್ಲ ॥ ಆರು ಮಂದಿಯು ಗಂಡರಾಳುವರು ಎನ್ನ ಆರು ಮಂದಿಗೆ ಮೂರು ಸುತರಿ ನಗೆ ॥ ಆರುಮೂರೇಳ್ವರು ಭಾವವ್ಮೈದುನರೆಲ್ಲ । ಆರೇನಂದರೆಬಿಡರು ಯಾರಿಗುಸುರಲಮ್ಮ॥ ೧ ॥ ಹತ್ತು ಮಂದಿ ಬೆನ್ನ ಮುತ್ತಿಕೊಂಡಿಹರೆ । ಮತ್ತೆ ಬಿಟ್ಟೇನಂದರೆ ಬಿಡಗೊಡರು ॥ ಅತ್ತಿಗೆನಗೆ ಹೆಣ್ಣೆ ಹೊತ್ತು ಹೊತ್ತಿನೊಳೆನ್ನ । ನೆತ್ತಿಯೊಳ್ಹಸ್ತವಿಟ್ಟೆನ್ನ ಸೆಣೆಸುವರಮ್ಮ॥ ೨ ॥ ಪಂಚ್ಕೈ ವರು ಎನ್ನ ತ್ವಂಚಾಹಂಚ ಎಂದು । ಸಂಚಿತ ಕರ್ಮವನುಣಿಸುವರು ॥ ವಂಚನೆಯುಳಿದ ಪ್ರಪಂಚವನು ಕಳದಿಹ । ಮಿಂಚಿನ ಪರಿಲಿ ವಿರಿಂಚಿ ಬರದಿಹನಮ್ಮ ॥ ೩ ॥ ಜ್ಯೇಷ್ಠನಾಗಿಹ ಪುತ್ರ ಧರ್ಮನ ಅಗಲಿಸಿ । ಭ್ರಷ್ಟ ಅತ್ತೆಯು ಮೃತ್ಯುವಾಗಿಹಳು ॥ ಮೆಟ್ಟಿನ ಹೊರಗೆ ಕಣ್ಣಿಟ್ಟು ಸಾಧುಗ ಳನ್ನು ದೃಷ್ಟಿಸಿ ನೋಡಲರಕ್ಷಣ ಬಿಡರಮ್ಮ ॥ ೪ ॥ ಒಂಭತ್ತು ಬಾಗಿಲ ಊಳಿಗವನು ಮಾಳ್ಪ । ಕುಂಭಕದ ನರಕ ಕಾವರಥಾಳಿ ॥ ಡಂಭಕ ವನು ಬಿಟ್ಟೆಂಬಿಕನೊಳಗೆ ಇಟ್ಟು । ವಿ । ಶ್ವಂಭರ ಪುರಂದರವಿಠಲ ಧ್ಯಾ ನದ ಗುಟ್ಟು ॥ ೫ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೪೬. ರಾಗ ಮುಖಾರಿ, ಝಂಪೆತಾಳ.

ಮೂಢ ಬಲ್ಲನೆ ಜ್ಞಾನದೃಢಭಕ್ತಿಯಾ । ಕಾಡ ಕಪಿ ಬಲ್ಲದೆ ಮಾಣಿಕದ ಬೆಲೆಯು ॥ ಪಲ್ಲ ॥ ಕೋಣ ಬಲ್ಲದೆ ವೀಣೆ ನುಡಿಯುವ ಸುನಾದವನು । ಗೋಣಿ ಬಲ್ಲದೆ ಎತ್ತಿನಾ ದುಃಖವಾ ॥ ಪ್ರಾಣ ತೊಲ ಗಿದ ದೇಹ ಕಿಚ್ಚಿಂದು ಬಲ್ಲದೆ । ಕ್ಷೋಣಿಯೊಳು ಕುರುಡ ಬಲ್ಲನೆ ಹಗಲು ಇರುಳಾ ॥ ೧ ॥ ಬಧಿರ ಬಲ್ಲನೆ ಸುಸಂಗೀತ ಸ್ವಾರಸ್ಯವನು । ಚದುರನು

ಡಿಯಾಡಬಲ್ಲನೆ ಮೂಕನು ॥ ಕ್ಷುಧೆ ಇಲ್ಲದ ಮನುಜ ಅಮೃತಾನ್ನ ಸವಿದಪನೆ। ಮಧುರವಚನವ ಬಲ್ಲನೇ ದುಷ್ಟ ಮನುಜಾ ॥ ೨ ॥ ಅಜ ಬರದ ಬರಹವನು ತೊಳೆಯ ಬಲ್ಲನೆ ಜಾಣ । ನಿಜಭಕ್ತಿಮುಕ್ತಿಸುಖ ವನ್ನು ಕೊಡುವಾ ॥ ಭುಜಗೇಂದ್ರಶಯನ ಸಿರಿಪುರಂದರಾವಿಠಲನ। ಭಜಿ ಸಲರಿಯದವ ಬಲ್ಲನೆ ಮುಕ್ತಿಸುಖವಾ ॥ ೩ ॥ ಶ್ರೀಃ ॥

## ೪೭. ರಾಗ ಸೌರಾಷ್ಟ್ರ, ಅಟತಾಳ.

ನೆಚ್ಚದಿರೀಭಾಗ್ಯ ಯಾರಿಗೂ ಸ್ಥಿರವಲ್ಲ ನಿಶ್ಚಯವೆಚ್ಚರಿಕೆ । ಹೆಚ್ಚದೆ ಹಿಗ್ಗದೆ ಇದ್ದರೆ ಲೋಕಕ್ಕೆ ಮೆಚ್ಚು ಕೇಳೆಚ್ಚರಿಕೆ ॥ ಪಲ್ಲ ॥ ದೊರೆಗ ಳೊಲುಮೆ ಉಂಟೆಂದೆಲ್ಲರೊಳು ಹಗೆ ಥರವಲ್ಲ ಎಚ್ಚರಿಕೆ। ಉರಗನ ಕಟ್ಟೆರುವೆಯು ಮುತ್ತಿ ತೋರದ ತೇರನಪ್ಪುದೆಚ್ಚರಿಕೆ ॥ ಕರವ ಮುಗಿದು ಸಜ್ಜನರಿಗೆ ಶಿರಬಾಗಿ ಚರಿಸುತಿರೆಚ್ಚರಿಕೆ । ಸಿರಿಯೆಂಬ ಮಾನ್ಯದ ಸೊಡ ರಿಗೆ ಅವಮಾನ ಬಿರುಗಾಳಿ ಯೆಚ್ಚರಿಕೆ ॥ ೧ ॥ ಪೊಡವಿಪರೊಲುಮೆ ಸುಸ್ಥಿರವೆಂದು ಗರ್ವದಿ ನಡೆಯದಿರೆಚ್ಚರಿಕೆ। ಕೊಡವನಂಧಕ ಪೊತ್ತು ನಡೆದಂತೆ ಅಧಿಕಾರ ಕಡೆಹೊಲ್ಲದೆಚ್ಚರಿಕೆ॥ ಬಡವರ ನುಡಿಗಳ ಕೇಳದೆ ಮುಂದ್ಹೆಜ್ಜೆಯಿಡಬೇಡೆಚ್ಚರಿಕೆ । ಕಡು ಚಪಲನು ನಾನೆನುತ ಪರರ ಅವಘಡಿಸಬೇಡೆಚ್ಚರಿಕೆ ॥ ೨ ॥ ಲೋಕಾಪವಾದಕೆ ಅಂಜಿ ನಡೆವುದು ವಿವೇಕ ಕೇಳೆಚ್ಚರಿಕೆ। ನಾಕೇಶಗಾದರು ಬಿಡದಪಕೀರ್ತಿ ಪರಾಕು ಕೇಳೆ ಚ್ಚರಿಕೆ ॥ ಕಾಕು ಮನುಜರ ಚಾಡಿಯ ಕೇಳಿ ಕೋಪೋದ್ರೇಕ ಬೇಡೆ ಚ್ಚರಿಕೆ । ಭೂಕಾಂತೆ ನಡನಡುಗುವಳು ನಿಷ್ಠುರವಾದ ವಾಕು ಬೇಡೆ ಚ್ಚರಿಕೆ॥ ೩ ॥ ನಳಮಾಂಧಾತರೇನಾದರೆಂಬದು ನೀ ತಿಳಿದು ನೋಡೆ ಚ್ಚರಿಕೆ । ಅಳಿವುದು ಕಾಯವು ಉಳಿವುದೊಂದೆ ಕೀರ್ತಿ ಇಳೆಯೊಳು ಎಚ್ಚರಿಕೆ॥ ಅಳಲಿಸಿ ಪರರನ್ನು ಘಳಿಸಿದಂಥಾ ಹೊನ್ನು ಉಳಿಯದು ಎಚ್ಚರಿಕೆ। ಉಳಿದಲ್ಪಕಾಲಕೆ ಬಡವರಾದವರನ್ನು ಪಳಿಯದಿರೆಚ್ಚರಿಕೆ ॥ ॥ ೪ ॥ ಪರಧನ ಪರಸತಿಗಳುಪಲು ಸಿರಿ ವೊಗ ತಿರುಹುವಳೆಚ್ಚರಿಕೆ । ಬರುವ ಹಾನಿ ವೃದ್ಧಿ ತನ್ನ ಕಾಲ ವಿಚಾರಲರಿಯದು ಎಚ್ಚರಿಕೆ ॥ ನೆರೆ

ಛಿದ್ರಕುಂಭದುದಕದಂತಾಯುಷ್ಯ ಸರಿವದು ಎಚ್ಚರಿಕೆ । ವರದ ಶ್ರೀ ಪುರಂದರವಿಠಲನ ಚರಣವ ನೆರೆನಂಬೆಚ್ಚರಿಕೆ ॥ ೫ ॥ ಶ್ರೀಃ ॥

ಳಲ. ರಾಗ ಕೇದಾರಗೌಳ, ಅಟತಾಳ.

ಯಾತರ ಚೆಲುವ । ರಂಗಯ್ಯ ಇ । ನ್ಯಾತರ ಚೆಲುವ । ಹರಿಯೆಂಬ । ಮಾತಿಗೆ ಬರಿದೆ ಮರುಳಾದೆವಲ್ಲದೆ ॥ ಪಲ್ಲ ॥ ದೇಶಕೋಶವುಂಟಾದರೆ ಮನೆಯ ವಾ । ರಾಶಿಯಲ್ಲಿ ತಾನು ಕಟ್ಟುವನೆ ॥ ಹಾಸುಮಂಚವಿದ್ದರೆ ಕಿವಿಯಿಲ್ಲದ । ಶೇಷನ ಮೇಲೊರಗುವನೆ ರಂಗಯ್ಯ ॥ ೧ ॥ ಪಡೆದ ತಾಯಿ ತನಗುಳ್ಳಡೆ ಗೋಪನ । ಮಡದಿಯ ಮೊಲೆಯನು ಉಣ್ಣುವನೆ ॥ ಮಡದಿಯು ಉಳ್ಳಡೆ ಅಡವಿಯ ಗೊಲ್ಲರ । ಹುಡುಗಿಯರ ಸಂಗ ಮಾಡ್ವನೆ ರಂಗ ॥ ೨ ॥ ಬುದ್ಧಿ ಹೇಳುವ ಪಿತನುಳ್ಳಡೆ ತಾ ಬೆಣ್ಣೆ । ಕದ್ದು ತಿಂದು ಚೋರನೆನಿಸುವನೆ ॥ ಬದ್ಧವಾಹನ ತನಗಿದ್ದರೆ ಹಾರುವ । ಹದ್ದಿನ ಮೇಲೇರಿ ತಿರುಗುವನೆ ರಂಗ ॥ ೩ ॥ ಸಿರಿಯುಳ್ಳಡೆ ಪೋಗಿ ಬಲಿಯ ಬಾಗಿಲ ಕಾಯ್ದು । ಧರೆಯ ದಾನಕೆ ಕೈ ಒಡ್ಡುವನೆ ॥ ಧೊರೆಯು ತಾನಾದರೆ ಪಾಂಡುಕುಮಾರನ । ತುರಗಭಂಡಿಯ ಬೋವನಾಗುವನೆ ರಂಗ ॥ ೪ ॥ ಮದನಜನಕ ತಾನು ಸೊಬಗುಳ್ಳನಾದರೆ । ಮುದುಕಿ ಕುಬುಜೆಯನ್ನು ಕೂಡುವನೆ । ಮುದದಿಂದ ತಾ ಪರದೈವವೆನಿಸಿಕೊಂಡ । ಚದುರ ಶ್ರೀಪುರಂದರವಿಠಲ ಅಮ್ಮಮ್ಮ ॥ ೫ ॥

ಳ೯. ರಾಗ ನೀಲಾಂಬರಿ, ಆದಿತಾಳ.

ಯಾಕೆ ಚಿಂತಿಸುತಿದ್ದಿ ಕೋತಿ ಮನವೆ ನೀ । ಶ್ರೀಕೃಷ್ಣರಾಯನ ಸ್ತುತಿಸಲೊಲ್ಲದೆ ॥ ಪಲ್ಲ ॥ ಹುಟ್ಟುವಗುತ್ಪತ್ತಿಗಾರು ಚಿಂತಿಸಿದರು । ಹೊಟ್ಟೆಯಿಂದಾಚೆಗೆ ಯಾರು ತಂದರು ॥ ನಟ್ಟನಡುವಿನ ಬದುಕಿಗ್ಯಾಕೆ ಚಿಂತಿಸುತ್ತಿ । ಕಟ್ಟಕಡೆಯಲಿ ಮೂರು ಬಟ್ಟೆ ತಾನಲ್ಲದೆ ॥ ೧ ॥ ನವಿಲಿಗೆ ಚಿತ್ರಪತ್ರಗಳ್ಯಾರು ಬರೆದರು । ಹವಳದ ಸಲ್ಲತೆಗೆ ಕೆಂಪಾರಿತ್ತರು ॥ ಸವಿಮಾತಿನ ಗಿಳಿಗೆ ಹಸುರ್ಯಾರು ಬರೆದರು । ಇವು ಮಾಡಿದ ಕೃಷ್ಣನು

ನಿನ್ನ ಮರತಿಹನೆ ॥ ೨ ॥ ಬಸುರೊಳಗಿಪ್ಪಾಗ ಶಿಶುವಾರು ಪೊರೆದರು । ವಸುಧೆಯ ಬಸುರೊಳು ಯಾರ್ಪೆತ್ತರು ॥ ವಸುದೇವಸುತ ನಮ್ಮ ಪುರಂದರವಿಠಲನ । ಪೆಸರು ಬಸುರೊಳಿಟ್ಟು ಸ್ತುತಿಸುತಿರು ಮನವೆ ॥ ೩ ॥

## ೫೦. ರಾಗ ಪಂತುವರಾಳಿ. ಝಂಪೆತಾಳ.

ರೊಕ್ಕವೆರಡಕ್ಕು ದುಃಖ ಕಾಣಕ್ಕ । ರೊಕ್ಕವೆರಡಕ್ಕೆ ದುಃಖ ॥ ಪಲ್ಲ ॥ ಮಕ್ಕಳ ಮರಿಗಳ ಮರಿಸೋದು ರೊಕ್ಕ । ಸಕ್ಕರೆ ತುಪ್ಪವ ಸವಿಸೋದು ರೊಕ್ಕ ॥ ಕಕ್ಕುಲತೆಯು ಬಹು ಬಡಿಸೋದು ರೊಕ್ಕ । ಫಕ್ಕನೆ ಹೋದರೆ ಘಾತ ಕಾಣಕ್ಕ ॥ ೧ ॥ ನೆಂಟರ ಇಷ್ಟರ ಇರಿಸೋದು ರೊಕ್ಕ । ಕಂಟಕಗಳ ಪರಿಹರಿಸೋದು ರೊಕ್ಕ ॥ ಗಂಟೆ ಕಟ್ಟಲಿಕೆ ಕಲಿಸೋದು ರೊಕ್ಕ । ತುಂಟತನಗಳನು ಬಲಿಸೋದು ರೊಕ್ಕ ॥ ೨ ॥ ಇಲ್ಲದ ಗುಣಗಳ ಬರಿಸೋದು ರೊಕ್ಕ । ಬಲ್ಲಿದನಿವನೆನಿಸೋದು ರೊಕ್ಕ ॥ ಸಲ್ಲದ ಮಾತನು ನುಡಿಸೋದು ರೊಕ್ಕ । ಇಲ್ಲದಿರಲು ಬಹು ದುಃಖ ಕಾಣಕ್ಕ ॥ ೩ ॥ ಉಂಟಾದ ಗುಣಗಳ ಮರಿಸೋದು ರೊಕ್ಕ । ಬಂಟರನೆಲ್ಲರ ಕರಿಸೋದು ರೊಕ್ಕ ॥ ಒಂಟೆ ಕುದುರೆ ಆನೆ ತರಿಸೋದು ರೊಕ್ಕ । ನೊಂಟಕಟ್ಟಿ ಮುಂದೆ ನಿಲಿಸೋದು ರೊಕ್ಕ ॥ ೪ ॥ ವಿದ್ಯದ ಮನುಜರ ತರಿಸೋದು ರೊಕ್ಕ । ಪೊಪ್ಪಿದ ಜನರನು ಬಿಡಿಸೋದು ರೊಕ್ಕ ॥ ಮುದ್ದು ಪುರಂದರ ವಿಠಲನ ಮರೆಸುವ । ಬಿದ್ದೋಗೋ ರೊಕ್ಕವ ಸುಡು ನೀನಕ್ಕ ॥ ೫ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೫೧. ರಾಗ ಪಂತುವರಾಳಿ. ಆದಿತಾಳ.

ಧರ್ಮವೆಂಬ ಸಂಬಳವ ಘಳಿಸಿಕೊಳ್ಳಿರೊ । ಪೆರ್ಮೆಯಿಂ ದೇಹವ ನಂಬಬೇಡಿ ಕಾಣಿರೋ ॥ ಪಲ್ಲ ॥ ಅಟ್ಟ ಅಡುಗೆ ಉಣಲು ಬಿಡನು । ಕೊಟ್ಟ ಸಾಲ ಕೇಳಬಿಡನು ॥ ಪೆಟ್ಟಿಗೆಯೊಳಿದ್ದ ಚಿನ್ನವ । ತೊಟ್ಟೇನೆಂದರೆ ಯಮನು ಬಿಡನು ॥ ೧ ॥ ಅಕ್ಕನಿಲ್ಲಿ ಕರೆಯಲಿಲ್ಲ । ಮಕ್ಕಳನ್ನು ಪಡೆಯಲಿಲ್ಲ ॥ ದುಃಖಗೊಂಡು ಕಣ್ಣೀರನು । ಉಕ್ಕಿಸಿದರೆ ಬಿಡನು ಯಮನು ॥ ೨ ॥

ಪೇಳ್ವೆ ನೆಂಟರಿಂಗೆ ಕರೆದು । ಬೇಳೆ ಬೆಲ್ಲವನ್ನು ತಂದು ॥ ನಾಳೆ ಮಗನ ಮದುವೆ ಎಂದು । ತಾಳು ಎಂದರೆ ಯಮನು ಬಿಡನು ॥ ೩ ॥ ಮಾಳಿಗೆ ಮನೆಯು ಇರಲಿ । ಜಾಳಿಗೆ ತುಂಬಿ ಹೊನ್ನಿರಲಿ ॥ ಆಳು ಮಂದಿ ಶಾನೆಯಿರಲಿ । ಕಾಲನು ತಾ ಬೆನ್ನ ಬಿಡನು ಇದಕೊ ॥ ೪ ॥ ಅರ್ತಿಯಿಂದ ಸಂಸಾರವ । ವ್ಯರ್ಥವಾಗಿ ನೆಚ್ಚಬ್ಯಾಡಿ ॥ ಕರ್ತು ಪುರಂದರವಿಠಲನ್ನ । ಭಕ್ತಿಯಿಂದಲೆ ಭಜಿಸಿರೊ ॥ ೫ ॥ ಶ್ರೀಃ ॥

೫೨. ರಾಗ ನೀಲಾಂಬರಿ, ಅಟತಾಳ.

ರಕ್ಷಿಸು ಲೋಕನಾಯಕನೆ ನೀ ಎನ್ನನು । ರಕ್ಷಿಸು ಲೋಕನಾಯಕನೆ ॥ ॥ ಪಲ್ಲ ॥ ಎಷ್ಟೆಷ್ಟು ಜನ್ಮವ ಕಳೆದೆನೊ ಇ । ನ್ನೆಷ್ಟೆಷ್ಟು ಜನ್ಮವ ಪಡೆವೆನೋ ॥ ಕಷ್ಟವ ಪಡಲಾರೆ ಕೃಷ್ಣ ಕೃಪೆಯನಿಟ್ಟು । ಇಷ್ಟವ ಪಾಲಿಸೊ ಇಭರಾಜವರದನೆ ॥ ೧ ॥ ಬಾಲತನದಿ ಬಹು ಬೆಂದೆನ್ನೆ ನಾ । ಲೀಲೆಯಿಂದಲಿ ಕಾಲ ಕಳೆದೆನೊ ॥ ಲೋಲಲೋಚನ ನನ್ನ ಮೊರೆ ಕೇಳುತ ಬೇಗ । ಜಾಲವ ಮಾಡದೆ ಪಾಲಿಸೈ ನರಹರಿ ॥ ೨ ॥ ಮುದುಕನಾಗಿ ಚಿಂತೆ ಪಡುವೆನು ನಾ । ಕಡದು ದುಃಖವ ಪಡಲಾರೆನು ॥ ಸದರವಲ್ಲವು ಶ್ರೀಪುರಂದರವಿಠಲ । ಮುದದಿಂದ ರಕ್ಷಿಸು ಖಗರಾಜಗಮನಾ ॥ ೩ ॥

೫೩. ರಾಗ ಮುಖಾರಿ, ಝಂಪೆತಾಳ.

ಯಾಕೆ ಈ ದೇಹ ದಂಡಿಸುವೆ ವ್ಯರ್ಥ ಬಿಡ । ದೇಕ ಚಿತ್ತದಿ ಲಕ್ಷ್ಮೀಪತಿಯೆನ್ನದೆ ॥ ಪಲ್ಲ ॥ ಸ್ನಾನವನು ಮಾಡಿ ನೀ ಧ್ಯಾನಿಸುವೆನೆಂದೆನುತ । ಮೌನದಲಿ ಕುಳಿತು ಬಕಪಕ್ಷಿಯಂತೆ ॥ ಹೀನಬುದ್ಧಿಗಳ ಯೋಚಿಸಿ ಕುಳಿತು ಫಲವೇನು । ದಾನವಾಂತಕನ ಧ್ಯಾನಕೆ ಮೌನವುಂಟೆ ॥ ೧ ॥ ಜಪವ ಮಾಡುವೆನೆನುತ ಕಪಟಬುದ್ಧಿಯ ಗುಣಿಸಿ । ಗುಪಿತದಿಂದಲೆ ಕುಳಿತು ಫಲವು ಯೇನೋ ॥ ಅಪರಿಮಿತ ಮಹಿಮ ನಾರಾಯಣ ಎಂದೆನಲು । ಸಫಲವಲ್ಲದೆ ಬೇರೆ ಜಪವು ತಾನುಂಟೆ ॥ ॥ ೨ ॥ ಹಿಂದಜಾಮಿಳಗೆ ನಾಮಾಮೃತದಿ ಮುಕುತಿಯನು । ಚಂದದಿಂ

ಕರುಣಿಸಿದುದಿಲ್ಲವೇನೋ ॥ ಸಂದೇಹವನು ಬಿಟ್ಟು ನೀನೊಂದು ಕ್ಷಣ ಬಿಡದೆ । ತಂದೆ ಪುರಂದರವಿಠಲನೆನು ಕಂಡ್ಯ ಮನವೆ ॥ ೩ ॥ ಶ್ರೀಃ ॥

### ೫೪. ರಾಗ ಕಾಪಿ, ಆದಿತಾಳ.

ಯಾತರ ಕಟಪಟಿ ಒಂದಿನ । ಹೋಗುತ್ತಿದ್ದಿ ಲಟಪಟೀ ॥ ಪಲ್ಲ ॥ ಬರೋವಾಗ್ಯೆ ಯೇನು ತಂದಿ । ಬರುತಲೇ ಎಲ್ಲಾನು ನನ್ನದೆಂದಿ ॥ ದುಡ್ಡು ಕೂಡಿಟ್ಟು ಬಳದು ಹೋಗುವಾಗ । ಬಳಲಿ ಬಳಲಿ ಅಳವಾರಿಗೆ ಬಂದಿ ॥ ೧ ॥ ದೊಡ್ಡ ಮನೆಯು ಕಟ್ಟಿ । ಅದರೊಳು ಮಡದಿಯ ಒಯ್ದಿಟ್ಟಿ ॥ ಮಡದಿಗೆ ಮೋಹದ ಮಗು ಒಂದು ಹುಟ್ಟಿ । ಅದರ ಮ್ಯಾಲೆ ನೀ ಮನಸಿಟ್ಟಿ ॥ ೨ ॥ ಸಂಸಾರ ಬಲು ಖೊಟ್ಟಿ । ಅದರೊಳು ಬಿದ್ದಿದ್ದಿ ಕಾಲ್ಕಟ್ಟಿ ॥ ತಂದೆ ಶ್ರೀಪುರಂದರವಿಠ್ಠಲರಾಯನ । ಧ್ಯಾನವನ್ನೇ ಮರೆತುಬಿಟ್ಟಿ ॥ ೩ ॥ ಶ್ರೀಃ ॥

### ೫೫. ರಾಗ ಪಂತುವರಾಳಿ, ಅಟತಾಳ.

ಭಾಂಗೆ ನಿನ್ನ ಬಾಳ್ವೆ ದಾಂಗೆ ॥ ಪಲ್ಲ ॥ ಬರುತೇನು ತಂದಿ ಬರಿಗೈಲಿ ಬಂದಿ । ಪರನಿಂದೆಗಳ ಕಟ್ಟಿ ಹರಕೊಂಡೇನಂದಿ ॥ ೧ ॥ ಇರು ಯೆಲೊ ಶಾಂತಿ ಈಡ್ಯಾಡೊ ಭ್ರಾಂತಿ । ಮೂರು ದಿನದ ಶಾಂತಿ ನಿನಗ್ಯಾಕೊ ಚಿಂತಿ ॥ ೨ ॥ ಅನುಗಾಲ ಕಿಚ್ಚು ಭವದೊಳಘುಚ್ಚು । ಅನುಭವದಚ್ಚು ಸವಿನೋಡೋ ಹುಚ್ಚು ॥ ೩ ॥ ಶ್ರೀಕೃಷ್ಣ ಧ್ಯಾನ ಮರಿಯದಿರಲಿ ಶ್ವಾನ । ಪರಿಪರಿ ದಿನದಲ್ಲಿ ತಿಳಿಯೊ ನೀ ಜ್ಞಾನ ॥ ೪ ॥ ಸಿರಿವರ ಕೃಷ್ಣ ಭವಭಯ ಭಂಗ । ಪುರಂದರವಿಠಲನ್ನ ಒಲಿಸಿಕೊ ಮಂಗ ॥ ಮುದಿಮಂಗ ॥ ೫ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

### ೫೬. ರಾಗ ಶಂಕರಾಭರಣ, ಅಟತಾಳ.

ಕಂದನ್ಯಾಕೆ ಮಲಗನೆ ಕೇಳೆಲೆ ಸಖಿ ॥ ಪಲ್ಲ ॥ ಕಾಯಜಜನಕಗೇನಾಯಿತು ಇವಗೆ ಯಾವಳ ದೃಷ್ಟಿ ತಾಗಿತೆ ॥ ಅನುಪಲ್ಲ ॥ ಕಂದನ್ಯಾಕೆ

ಕಣ್ಣುಮುಚ್ಚನೆ । ಇಂದು ನೀರವಡದಲ್ಲಿರುವನೆ । ಏ ॥ ನೆಂದರು ಮುಖ ವೆತ್ತಿ ನೋಡನೆ । ಗೋ । ವಿಂದ ಬಾ ಯೆಂದರೆ ಬಾಯ ತೆರವನೆ ॥ ॥ ೧ ॥ ತನಯನಾಗಿ ಧರೆ ಆಳಿದನೆ । ತನ್ನ । ಜನನಿಯ ಕಂಡರೆ ಸೇರನೆ ॥ ಮುನಿಗಳಂತೆ ಮೌನ ಪಿಡಿದನೆ । ಘನಗೋವು ಕಾಯ್ವಾಗ ಘಾಳಿ ಸೋಕಿತೇನೆ ॥ ೨ ॥ ಸುಮ್ಮನ್ಯಾತಕೆ ವ್ರತ ಕೆಡಿಸಿದನೆ । ಹಮ್ಮಿನಿಂದಲಿ ಖಡ್ಗ ಪಿಡಿದನೆ ॥ ಜನ್ಮಜನ್ಮಗಳಲ್ಲಿ ಬಿಡದಲಿರುವ ನೀ ಬಾರೊ । ಬೊಮ್ಮ ಶ್ರೀಪುರಂದರವಿಠಲ ॥ ೩ ॥ ಶ್ರೀಃ ॥

## ೫೭. ರಾಗ ಆಹೇರಿ, ಅಟತಾಳ.

ಕಟ್ಟಬೇಕು ಕಾಟದೆಮ್ಮೆ ಅದರ ಹಯನ । ಎಷ್ಟಾದರು ಉಣಬೇಕು ॥ ॥ ಪಲ್ಲ ॥ ಹಮ್ಮು ಎಂಬೊದೆ ಎಮ್ಮೆ ಗಮ್ಮು ಎಂಬೊದೆ ಹಗ್ಗ । ಹೆಮ್ಮೆ ಎಂಬೊದೆ ಅದಕೆ ಧಮ್ಮ ಗುದ್ದಿ ॥ ಸುಮ್ಮನ ಮನದಿಂದ ಹಾಲ್ಕರದು ಪರ । ಬೊಮ್ಮನಿಗರ್ಪಿಸಬೇಕು ನಿತ್ಯದೀ ॥ ೧ ॥ ಚಂಡಿತನವೆಂಬ ಹಿಂಡಿ ಇಡಬೇಕು । ದಿಂಡತನಯೆಂಬ ಪೆಂಡೆಮೇವೂ ॥ ಪುಂಡತನ ಯೆಂಬೊ ಪಿಂಡಿರುಬ್ಬಿಡಬೇಕು । ಪಾಂಡುರಂಗ ಗುಂಡಿ ಒಳಗೆ ಹಿಂಡಿ ಕೊ ಬೇಕು ॥ ೨ ॥ ಅಂತರಂಗದ ಒಳಗೆ ಭ್ರಾಂತಿ ಬಿಡಿಸುವ ಎಮ್ಮೆ । ಅಂತು ದಾರಿಗೂ ತಿಳಿಯದಿಂಥ ಎಮ್ಮೆ ॥ ಕಂತು ಜನಕ ಸ್ವಾಮಿ ಪುರಂ ದರವಿಠಲನ । ಸಂತರ ಮನೆಯೊಳಗೆ ಇಂಥೆಮ್ಮೆ ಇರಬೇಕು ॥ ೩ ॥

## ೫೮. ರಾಗ ಪೂರ್ವಿ, ಅಟತಾಳ.

ಇಲ್ಲಿ ನಮ್ಮ ಶಾಸ್ತ್ರ ಮಾರುವದಿಲ್ಲ । ಸುಮ್ಮನಿದ್ದರೆ ದಾರು ಕೇಳುವರಿಲ್ಲ ॥ ॥ ಪಲ್ಲ ॥ ಏಡಿ ಕಡಗವಿಟ್ಟು ಫಲವೇನಿಲ್ಲ । ಬೇಡ ತಾ ಮುತ್ತಿನ ಬೆಲೆ ಯೇನು ಬಲ್ಲ ॥ ಕಾಡಳ್ಳಿ ಗೌಡ ತಾ ಅರಸಾಗಲಿಲ್ಲ । ವೇದಶಾಸ್ತ್ರಕೆ ಮೂಢ ತಲೆತೂಗಲಿಲ್ಲ ॥ ೧ ॥ ಮೂಕ ತಾ ಮಾತಿನ ಸವಿಯೇನು ಬಲ್ಲ । ಲೌಕಿಕ ಬೇನೆ ಸನ್ಯಾಸ್ಯೇನು ಬಲ್ಲ ॥ ಕಾಕುಮಾನವ ಪುಣ್ಯಪಾಪೇನು ಬಲ್ಲ । ಶ್ರೀ ಕೃಷ್ಣನ ನೆನೆಯದವ ಮಾನವನಲ್ಲಾ ॥ ೨ ॥ ಕತ್ತೆಗೆ ಹೂರಣದ ರುಚಿ

ತಿಳಿಯಲಿಲ್ಲ। ತೊತ್ತಿಗೆ ಪತಿವ್ರತ ಗುಣ ಬರಲಿಲ್ಲ॥ ಮುತ್ತಿನ ಹಾರ ಕಪಿಗೆ ಹಾಕ ಸಲ್ಲ। ಕುತ್ತಿಗೆ ಕೊಯ್ವಗೆ ಕರುಣವೇ ಇಲ್ಲ ।೩॥ ಅಚ್ಚ ಹೆಣ್ಣಿನ ಸಂಗ ಷಂಡೇನು ಬಲ್ಲ । ಮುಚ್ಚಿ ಮಾಥೇಳಿದರೆ ನ್ಯಾಯೇನು ಇಲ್ಲ ॥ ಸ್ವಚ್ಛ ದೀಪದ ಬೆಳಕು ಕುರುಡೇನು ಬಲ್ಲ । ಪೊಚ್ಚಿಗಾರ ಸಕಲಾತೇನು ಬಲ್ಲ ॥ ೪ ॥ ಹೆಣ್ಣಿಗೆ ಜಾರತ್ವಗುಣ ಥರವಲ್ಲ । ತಣ್ಣೀರು ಬ್ಯಾಸಿಗ್ಗೆ ಗುಣ ತೋರಿತಲ್ಲ॥ ಘನ್ನ ಪುರಂದರವಿಠಲನ ಭಕ್ತರೇ। ಅನ್ಯಾಯವರಿಯದೇ ಭವನೀಗ್ವರೆಲ್ಲಾ ॥ ೫ ॥ ಶ್ರೀಃ ॥

## ೫೯. ರಾಗ ಸಾರಂಗ, ತ್ರಿಪುಟತಾಳ.

ಅರಿಯದೆ ಬಂದೆವು ಕಿವ್ಸನ್ । ಪರಿಹರಿಸಯ್ಯ ಭವ್ಸನ್ ॥ ಪಲ್ಲ ॥ ಪರಿಪರಿಯಿಂದಲೆ ಹರಿಹರಿಯೆಂದರೆ। ದುರಿತದ ಭಯ ಒಂದಿಲ್ಲಲ್ಲ॥ ಅನುಪಲ್ಲ ॥ ಮತ್ಸ್ಯಾವತಾರಗೆ ಕಿವ್ಸನ್ । ಕೂರ್ಮವತಾರಗೆ ಭವ್ಸನ್ । ಸ್ವಚ್ಛಾನಂತನ ಸ್ಮರಣೆಯ ಮಾಡಿದರೆ । ಮೋಕ್ಷಪದವ್ಯಾಕಲ್ಲಲ್ಲ ॥ ೧ ॥ ಸೂಕರನ ಕೊಂದವಗೆ ಕಿವ್ಸನ್ । ಪ್ರಹ್ಲಾದಗೆ ಒಲಿದಗೆ ಭವ್ಸನ್ ॥ ನಾರಾಯಣ ನಿಮ್ಮ ನಾಮವ ನೆನದರೆ। ನರಕದ ಭಯ ಒಂದಿಲ್ಲಲ್ಲಾ ॥ ॥ ೨ ॥ ಧರೆಯನಳದಗೆ ಕಿವ್ಸನ್ । ಕೊಡಲಿಯ ಪಿಡಿದಗೆ ಭವ್ಸನ್ ॥ ಪರಿಪರಿಯಿಂದಲೆ ಹರಿಹರಿಯೆಂದರೆ । ದುರಿತದ ಭಯ ಒಂದಿಲ್ಲಲ್ಲಾ ॥ ॥ ೩ ॥ ರಾವಣನಳಿದಗೆ ಕಿವ್ಸನ್। ಗೋವಳ ಕೃಷ್ಣಗೆ ಭವ್ಸನ್ ॥ ಭಾವೆ ದ್ರೌಪದಿ ಸಭೆಯುಲ್ಯಾಗಭಿ । ಮಾನವ ಕಾಯ್ದನಲ್ಲಲ್ಲ ॥ ೪ ॥ ಬತ್ತಲೆ ನಿಂತಗೆ ಕಿವ್ಸನ್ । ಮತ್ತಶ್ವವನೇರ್ದಗೆ ಭವ್ಸನ್ ॥ ಸತ್ಯದಿ ಪುರಂದರ ವಿಠಲನ ನೆನದರೆ। ಸತ್ಯಲೋಕವಾಯ್ತಲ್ಲಲ್ಲಾ ॥ ೫ ॥

## ೬೦. ರಾಗ ಸೌರಾಷ್ಟ್ರ, ಅಟತಾಳ.

ಕೈವಿಾರಿ ಹೋದ ಮಾತಿಗೆ ಹುಡುಕಾಡಬಾರದು ॥ ಪಲ್ಲ ॥ ಮಾತು ಕೇಳದ ಮಕ್ಕಳ ಹೆಸರು ತೆಗೆಯಬಾರದು ॥ ತನ್ನ ॥ ಪ್ರೀತಿ ಇಲ್ಲದ ಪತಿಯ ಕಂಡು ಹಿಗ್ಗಬಾರದು ॥ ೧ ॥ ಜಾರತ್ವಮಾಡೊ

ಪತ್ನಿಯು ಕೂಡಿ ಆಳಬಾರದು ॥ ವೈರತ್ವಮಾಳ್ಪವರ ಸೊಲ್ಲು ಕೇಳ ಬಾರದು ॥ ೨ ॥ ದುಷ್ಟೆ ಕರ್ಕಶಿ ಸ್ತ್ರೀಯಳ ಹೆಸರು ತೆಗೆಯಬಾರದು ॥ ಹತ್ತು ಮಂದಿಗಂಜದವನ ಸ್ನೇಹಿಸಬಾರದು ॥ ೩ ॥ ಪಂಕ್ತ್ಯಾಗೆ ಪರ ಪಂಕ್ತಿಯನ್ನು ಮಾಡಬಾರದು ॥ ಮಂಕುಜೀವನಾಗಿ ಮುಕ್ತಿ ಬೇಡ ಬಾರದು ॥ ೪ ॥ ಆಚಾರಹೀನ ಮನೆಯೊಳೂಟಮಾಡಬಾರದು ॥ ವಿಚಾರ ಇಲ್ಲದ ಸಭೆಯೊಳು ಕೂಡ್ರಬಾರದು ॥ ೫ ॥ ಪರ ಪುರುಷರಿದ್ದೆಡೆಯೊಳೊ ಬ್ಬಳಿರಲು ಬಾರದು ॥ ಸ್ವಾಮಿ ॥ ಪುರಂದರವಿಠಲನ ಧ್ಯಾನ ಮರೆಯ ಬಾರದು ॥ ೬ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೬೧. ರಾಗ ಮುಖಾರಿ, ಝಂಪೆತಾಳ.

ಯಾರಿದ್ದರೇನಯ್ಯ ನೀನಲ್ಲದೆನಗಿಲ್ಲ । ಕಾರುಣ್ಯನಿಧಿ ಹರಿಯೆ ಕಯ್ಯ ಬಿಡಬೇಡ ॥ ಪಲ್ಲ ॥ ದುರುಳ ಕೌರವನಂದು ದ್ರುಪದಜೆಯ ಸೀರೆ ಯನು । ಕರದಿಂದ ಸೆಳೆಯುತಿರೆ ಪತಿಗಳೆಲ್ಲ ॥ ಗರಹೊಯ್ದಂತಿರ್ದ ರಲ್ಲದೆ ನರಹರಿಯೆ । ಕರುಣದಿಂ ನೀನಲ್ಲದಿನ್ನಾರು ಕಾಯ್ದವರು ॥ ೧ ॥ ಅಂದು ನೆಗಳಿನ ಬಾಧೆಯಿಂದ ಗಜರಾಜನನು । ತಂದೆ ನೀ ವೈಕುಂಠ ದಿಂದ ಬಂದು ॥ ಇಂದಿರೇಶನೆ ಚಕ್ರದಿಂದ ನೆಗಳಿನ ಬಾಯ । ಸಂಧಿ ಯನು ಶೀಳಿ ಪೊರೆದೆಯಲ್ಲೊ ಹರಿಯೆ ॥ ೨ ॥ ಅಜಮಿಳನು ಕುಲಗೆಟ್ಟು ಕಾಲದೂತರು ಬರಲು । ನಿಜಸುತನ ಕರಿಯೆ ನೀನತಿ ವೇಗದಿ ॥ ತ್ರಿಜಗ ದೊಡೆಯನೆ ಪುರಂದರವಿಠಲ ಕರುಣದಲಿ । ನಿಜದೂತರ ಕಳುಹಿ ಕಾಯ್ದೆಗಡ ಹರಿಯೆ ॥ ೩ ॥ ಶ್ರೀಃ ॥

## ✓ ೬೨. ರಾಗ ಮುಖಾರಿ, ಝಂಪೆತಾಳ.

ಆರೇನು ಮಾಡುವರು ಆರಿಂದಲೇನಹುದು । ಪೂರ್ವಜನ್ಮದ ಕರ್ಮ ವಿಧಿ ಬೆನ್ನ ಬಿಡದು ॥ ಪಲ್ಲ ॥ ಐದು ವರ್ಷದ ಹಸುಳ ವನವೆತ್ತ ತಪವೆತ್ತ । ಬೈದು ಮಲತಾಯಿಯಡವಿಗೆ ನೂಕಲು ॥ ಸುಯ್ದು

ಕೋಪಾಗ್ನಿಯಲಿ ಪುರ ಹೊರಟು ಪೋಪಾಗ । ಐದೆ ಪಿತರುಗಳಿಪ್ಪು ಯೇನು ಮಾಡಿದರು ॥ ೧ ॥ ಪಾಪಿ ದುಃಶ್ಯಾಸ ದ್ರೌಪದಿಯ ಶೀರೆಯ ಶೆಳದು । ಕೋಪದಿಂ ಮಾನಭಂಗವ ಮಾಡಲು ॥ ಶ್ರೀಪತಿಯೆ ಕಾಯೆಂದು ಮೊರೆಯಿಡುವ ಸಮಯದಲಿ । ಭೂಪರೈವರು ಇದ್ದು ಯೇನು ಮಾಡಿದರು ॥ ೨ ॥ ರಣದೊಳಗೆ ಅಭಿಮನ್ಯು ಚಕ್ರವ್ಯೂಹವ ಪೊಕ್ಕು । ಷಣಷಡುರಥರೊಡನೆ ಹೊಯ್ದಾಡಲು ॥ ಅಳಕವಿಲ್ಲದೆ ಕಾಡುತಸುವಳಿದು ಪೋಪಾಗ । ತ್ರಿನಯನಸಖ ಪಾರ್ಥರಿದ್ದೇನು ಮಾಡಿದರು ॥ ೩ ॥ ನೃಪರೊಳಗೆ ಅತಿಶ್ರೇಷ್ಠ ಬಲವಂತ ಸಿರಿರಾಮ । ಅಪರಿಮಿತ ಶೌರಿ ಲಕ್ಷ್ಮಣದೇವರು ॥ ಚಪಲಾಕ್ಷಿ ಸೀತೆಯನು ಖಳನು ಕದ್ದೊಯ್ವಾಗ । ನಿಪುಣರಿವರಿದ್ದು ಇನ್ನೇನು ಮಾಡಿದರು ॥ ೪ ॥ ಬ್ರಹ್ಮಶಿರ ಶಿವನ ಕರವನು ಕಚ್ಚಿಕಾಡುತಿರೆ । ಸುಮ್ಮನೆ ಜಗವೆಲ್ಲ ತಿರುಗುತಿರಲು ॥ ಬೊಮ್ಮಮೂರುತಿ ನಮ್ಮ ಪುರಂದರವಿಠಲನೆ । ನಿಮ್ಮ ಆಜ್ಞೆಯ ಮೀರಿ ಬದುಕಿ ಬಾಳುವರೆ ॥ ೫ ॥ ಶ್ರೀಃ ॥

೬೩. ರಾಗ ಮುಖಾರಿ, ಝಂಪೆತಾಳ.

ಅಂತಕನ ದೂತರಿಗೆ ಕಿಂಚಿತ್ತು ದಯವಿಲ್ಲ । ಚಿಂತೆಯನು ಬಿಟ್ಟು ಸಿರಿಹರಿಯ ನೆನೆ ಮನವೆ ॥ ಪಲ್ಲ ॥ ದಿವ ರಾತ್ರಿಯೆನ್ನದೆ ವಿಷಯಲಂಪಟನಾಗಿ । ಸವಿಯೂಟಗಳನುಂಡು ಭ್ರಮಿಸ ಬೇಡಾ ॥ ಅವನ ಕೊಂದಿವನ ಕೊಂದರ್ಥವನು ಘಳಿಸುವಡೆ । ಜವನ ದೂತರು ಬರುವ ಹೊತ್ತ ನೀನರಿಯೇ ॥ ೧ ॥ ಮೊನ್ನೆ ಮದಿವ್ಯಾದೆನ್ನೆ ಕರೆವದೊಂದೆರಡೆಮ್ಮೆ । ನಿನ್ನೆ ಕೊಂಡೆನು ಕ್ಷೇತ್ರ ಫಲವು ಬಹುದೂ ॥ ಹೊನ್ನು ಹಣವುಂಟೆನಗೆ ಸಾಯಲಾರೆನು ಎನಲು । ಬೆನ್ನ ಬಿಡುವಳೆ ಮೃತ್ಯ ವ್ಯರ್ಥ ಜೀವಾತ್ಮಾ ॥ ೨ ॥ ಹೊಸಮನೆಯ ಕಟ್ಟಿದೆನು ಗೃಹಶಾಂತಿ ಮನೆಯೊಳಗೆ । ಬಸುರು ಹೆಂಡತಿ ಮಗನ ಮದುವೆ ನಾಳೇ ॥ ಹಸನಾಗಿ ಇದೆ ಬದುಕು ಸಾಯಲಾರೆನು ಎನಲು । ಕುಸುರಿದರಿಯದೆ ಬಿಡರು ಯಮನವರು ಆಗಾ ॥ ೩ ॥ ಪುತ್ರ ಹುಟ್ಟಿದ ದಿವಸ ಹಾಲಿನ್ನೂಟದ ಹಬ್ಬ । ಮತ್ತೊಬ್ಬ ಮಗನ ಉಪನಯನ ನಾಳೇ ॥ ಅತಿಯಾಗಿದೆ ಬದುಕು ಸಾಯಲಾರೆನು ಎನಲು ।

ಮೃತ್ಯು ಹೆಡತಲೆಯಲ್ಲಿ ನಗುತಿಪ್ಪಳಯ್ಯಾ ॥ ೪ ॥ ಅಟ್ಟಡಿಗೆಯುಣಲಿಲ್ಲ ಇಷ್ಟದರುಶನವಿಲ್ಲ । ಕೊಟ್ಟ ಸಾಲವ ಕೇಳ್ವ ಹೊತ್ತನರಿಯೆ ॥ ಕಟ್ಟೆ ತುಂಬಿದ ಮೇಲೆ ಕ್ಷಣಮಾತ್ರ ಇರಲಿಲ್ಲ । ಅಷ್ಟರೊಳು ಪುರಂದರವಿಠಲೆನ್ನು ಮನವೇ ॥ ೫ ॥ ಶ್ರೀಃ ॥

## ೭೪. ರಾಗ ಮುಖಾರಿ, ಝಂಪೆತಾಳ.

ಮಾನಹೀನನಿಗಭಿಮಾನವೇಕೆ । ಜ್ಞಾನವಿಲ್ಲದವಗೆ ಗುರುಬೋಧೆಯೇಕೆ ॥ ಪಲ್ಲ ॥ ಅಂಬಲಿಯುಂಬವಗೆ ಅಮೃತಾನ್ನ ಕೊಡಲೇಕೆ । ಕಂಬಳಿಯ ಹೊದಿವವಗೆ ಶಾಲದೇಕೆ ॥ ಡಂಭಕನೆನಿಸುವಗೆ ಗಂಭೀರತನವೇಕೆ । ಹಂಬಲಿಸುವವಗೆ ವೈರಾಗ್ಯವೇಕೆ ॥ ೧ ॥ ಭೂಸುರರ ಕೊಲ್ಲುವಗೆ ದಾನಧರ್ಮಗಳೇಕೆ । ಭಾಷೆಗೆಡುಕನಿಗೆ ನಂಬಿಗೆ ಯೇತಕೆ ॥ ಕ್ಲೇಶಒಡಲೊಳಗಿರಲು ತೀರ್ಥಯಾತ್ರೆಗಳೇಕೆ । ಆಶೆ ಬಿಡದಿರ್ಪಗೆ ಸನ್ಯಾಸವೇಕೆ ॥ ೨ ॥ ಕಾಡಿನಲಿ ತಿರುಗುವಗೆ ಕನಕಭೂಷಣವೇಕೆ । ಓಡಿನಲಿ ಉಂಬವಗೆ ಹಂವಾಣವೇಕೆ ॥ ಬೇಡಿದರೆ ಕೊಡದ ಲೋಭಿಗೆ ಬಿಂಕತನವೇಕೆ । ಪಾಡದ ಸರಸನಿಗೆ ಜಾಣತನವೇಕೆ ॥ ೩ ॥ ಕ್ಷಿತಿಯೊಳಗೆ ಸತಿಯರಾಳದವಗೆ ಸುತರೇಕೆ ॥ ಸತಿಗಳುಕುವಗೆ ಮೋಡಿತಾನೇತಕೆ ॥ ಮಿತವರಿತು ನಡೆವವಗೆ ಮಂತ್ರತಂತ್ರಗಳೇಕೆ । ಸುತರಿಲ್ಲದವಗೆ ಪೂಜ್ಯತ್ವವೇಕೆ ॥ ೪ ॥ ಆಳು ಇಲ್ಲದವನಿಗೆ ಅರಸುತನ ತಾನೇಕೆ । ಕಾಲು ಇಲ್ಲದವಂಗೆ ಕೃಷಿಯೇತಕೆ ॥ ತೋಳು ಇಲ್ಲದವನಿಗೆ ಭುಜಕೀರ್ತಿ ತಾನೇಕೆ । ಲೋಲಪುರಂದರವಿಠಲನೆನ್ನದವನೇಕೆ ॥ ೫ ॥ ಶ್ರೀಃ ॥

## ೭೫. ರಾಗ ಕಾಂಬೋಧಿ, ಝಂಪೆತಾಳ.

ಹರಿಯಧಿಕ ಹರನಧಿಕನೆಂದು ಬಡದಾಡದಿರಿ । ಹರಿಹರರ ಭಕುತರಿ ಇದಕೆ ಸಾಕ್ಷಿ ॥ ಪಲ್ಲ ॥ ಹರಿಯು ಬಾಗಿಲಕಾಯ್ದು ಬಲಿಯು ಭಾಗ್ಯವಂತನಾದ । ಹರನು ಬಾಗಿಲ ಕಾಯ್ದು ಬಾಣನಳಿದಾ ॥ ಹರಿ ಒಲಿದು ಭೀಮಗೆ ಪರಿಪೂರ್ಣ ವರವಿತ್ತ । ಹರನೊಲಿದು ಜರಾಸಂಧ ಹತನಾಗುದರಿಯಾ ॥ ೧ ॥ ಹರಿಯ ನೆನೆದು ಪ್ರಹ್ಲಾದ ಬಂದ ದುರಿತವ ಗೆದ್ದ ।

ಹರನ ನೆನೆದವನು ಪಿತ ಹತನಾದಾ ॥ ಹರಿಯ ನೆನೆದು ವಿಭೀಷಣ ಪೂರ್ಣ ವರ ಪಡೆದ । ಹರನ ವರ ಪಡದ ರಾವಣ ಹತನಾದನರಿಯಾ ॥ ॥ ೨ ॥ ಹರನ ವರ ಪಡೆದ ಭಸ್ಮಾಸುರ ಗರ್ವದಲಿ । ಹರ ಶಿರದಲಿ ಕರ ವಿಡಲು ಬರಲು ॥ ಹರಿ ನೀನೆ ಗತಿಯೆಂದು ತ್ರಿಪುರಾರಿ ಮೊರೆಯಿಡಲು । ವರದ ಪುರಂದರವಿಠಲ ಕಾಯ್ದನರಿಯಾ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೬೬. ರಾಗ ಪೂರ್ವಿ, ಆದಿತಾಳ.

ನೆಚ್ಚನಯ್ಯ ಹರಿ ಮೆಚ್ಚನಯ್ಯ ॥ ಪಲ್ಲ ॥ ಉತ್ತಮನೆಂದೆನಿಸಿಕೊಂಡು ಅರುಣೋದಯದ ಕಾಲದಲ್ಲಿ ॥ ನಿತ್ಯ ಕಾಗೆಯ ಹಾಗೆ ನೀರೊಳಗೆ ಮುಳುಗುವವಗೆ ॥ ೧ ॥ ತೊಗಲಿನ ದೇಹಕ್ಕೆ ಗೋಪಿಗಂಧ ತೇದು ಕೊಂಡು ॥ ರೋಗಬಂದೆಮ್ಮೆಯ ಹಾಗೆ ಬರೆದುಕೊಂಬ ಮನುಜನಿಗೆ ॥ ॥ ೨ ॥ ಮರುಳುತನವು ಮಾತಿನಲ್ಲಿ ಹೃದಯದಲ್ಲಿ ವಿಷದ ಘುಟಿಕೆ ॥ ಮರದ ಮೇಲಣ ಓತಿಯಂತೆ ನಮಿಸುವಂಥ ದುರಳನಿಗೆ ॥ ೩ ॥ ಹಣ ವಿಗೆ ಹಾರೈಸಿಕೊಂಡು ತಿರುಪತಿಗ್ಹೋಗಿಹರ ಕಂಡು ॥ ಹಣಕಾಸು ಕೊಂಡು ಬಂದು ಸ್ವಾಮಿಯ ನೋಡುವವಗೆ ॥ ೪ ॥ ಬಾಯ ಬೀಗದಲ್ಲಿ ಹೊಯ್ದು ಹಾಲುತುಪ್ಪಗಳನು ಸವಿದು ॥ ನ್ಯಾಯ ಹುಳತ ನಾಯಿಯಂತೆ ಬೀದಿ ಬೀದಿ ತಿರುಗುವವಗೆ ॥ ೫ ॥ ತಾನು ತನ್ನ ಮನೆಯ ಒಳಗೆ ದಾನಧರ್ಮ ಗಳನು ಕೊಡದೆ ॥ ನೀನು ದಾನಮಾಡು ಎಂದು ಅನ್ಯರಿಗೆ ಹೇಳುವವಗೆ ॥ ೬ ॥ ಏಕೋಭಾವ ಏಕೋಭಕ್ತಿ ಏಕೋಯುಕ್ತಿ ಏಕೋಮುಕ್ತಿ ॥ ಬೇಕಾದ ಪುರಂದರವಿಠಲನ್ನ ಭಜಿಸದೆ ॥ ೭ ॥ ಶ್ರೀಃ ॥

೬೭. ರಾಗ ಸಾವೇರಿ, ಝುಂಪೆತಾಳ.

ಆರು ಸರಿ ನಿನಗೆ ಬ್ರಹ್ಮಾಂಡದೊಳಗೆ । ವೀರ ರಾಮನ ಬಂಟ ಧೀರ ಹನುಮಂತ ॥ ಪಲ್ಲ ॥ ತೆಂಕಜಲಧಿಯ ಲಘುವಿಂದ ದಾಟಿ ಆಕ । ಳಂಕ ರಾಮನ ಬೆರಳ ಮುದ್ರಿಕೆಯನು ॥ ಲಂಕಾವಿದೆಂದು ಕೊಟ್ಟವನಿ ಜೆಯ ಸಂತೈಸಿ । ಲಂಕೆಯನುರುಹಿದೆ ನಿಶ್ಶಂಕ ಹನುಮಂತ ॥ ೧ ॥ ಅಂಡ

ಲಿದು ದಶವದನನಸುರಪಡೆಗಳ ಕಡಿದು । ಖಂಡ ತುಂಡನೆ ಮಾಡಿ ಕಲಿರಾಮರ ॥ ದಂಡಿಲೊಬ್ಬರ ನೋಯದಂತೆ ಕಾದಿಸಿ ಖಳರ । ಹಿಂಡುಗಳ ಗೂಡ ಉದ್ದಂಡ ಹನುಮಂತ ॥ ೨ ॥ ಅಸುರ ಬಲ ವಾನರರ ಕುಸುರಿದರಿಯಲು ಭರ । ವಸದಿಂದ ಸಂಜೀವನೀಯ ತಂದು ॥ ಅಸುಬಿ ವಾನರರಿಗೋಸುಗ ಗಿರಿಯನೆತ್ತಿ ಚಿ । ಮ್ಮಿಸಿ ನೆಲಕೆ ನಿಲಿಸಿದಿ ನೀ ಅಸಮ ಹನುಮಂತಾ ॥ ೩ ॥ ಪರರಿಗಸದಳವೆನಿಪ ನಿಜಬಲರೊಡೆಯ ಪಂಥ । ಸಿರಿಯುರಕ್ಕೆರಗಿ ಎಸೆದಾಗ ಬೀಳೆ ॥ ಅರಸು ರಾಮರ ಪಂಥಗಡ್ಡಲಾದೆನು ಎಂದು । ಮರುಗಿದ ಮಹಾತ್ಮನುದ್ಧುರುಟು ಹನುಮಂತ ॥ ೪ ॥ ಭೂಮಿಜಾತೆಯ ಮುಖಾಂಬುಜಮಿತ್ರನಾದ ಸಿರಿ । ರಾಮ ಗುರು ಪುರಂದರವಿಠಲನು ॥ ತಾ ಮನದಿ ನಿಶ್ಚೈಸಿ ಬೇಡೆನಲು ತವ ಪಾದ । ದಾ ಮಹಾಸೇವೆ ಸಾಕೆಂದ ಹನುಮಂತ ॥ ೫ ॥ ಶ್ರೀಃ ॥

೬೮. ರಾಗ ಭೈರವಿ, ಅಟತಾಳ.

ಎಂದಪ್ಪಿಕೊಂಬೆ । ರಂಗಯ್ಯನ । ಎಂದಪ್ಪಿಕೊಂಬೆ ॥ ಪಲ್ಲ ॥ ಎಂದಪ್ಪಿಕೊಂಬೆ ನಾ ಎಂದು ಮುದ್ದಾಡುವೆ । ಎಂದಿಗೆ ಸವಿಮಾತು ಕೇಳಿ ನಾ ದಣಿವೆ ॥ ಅನುಪಲ್ಲ ॥ ಅಂದುಗೆ ಪೊಂಗೆಜ್ಜೆ ಪಾಯ್ಜಟ ಘಲು ಘಲು ॥ ಅಂದದಿ ಕುಣಿವ ಗೋವಿಂದನ ಚರಣವ ॥ ೧ ॥ ಹೊನ್ನ ಉಡುದಾರ ರನ್ನ ಕಾಂಚೀದಾಮ ॥ ಸಣ್ಣ ನಡುವಿಗಿಟ್ಟ ಜಾಹ್ನವೀಜನಕನ ॥ ೨ ॥ ಅಪ್ಪಣ್ಣ ಭಾಗವತನ ನೇಮವ ತಾಳಿ ॥ ತುಪ್ಪದ ಬಿಂದಿಗೆ ತಂದ ಸರ್ಪಶಯನನ ॥ ೩ ॥ ಅರಳೆಲೆ ಮಾಗಾಯಿ ಕೊರಳ ಕೌಸ್ತುಭ ಹಾರ ॥ ತರಳರ ಒಡಗೂಡಿ ಬೆಣ್ಣೆಯ ಮೆಲುವನ ॥ ೪ ॥ ಧರೆಯೊಳು ಸುಜನರ ಮರೆಯದೆ ಸಲಹುವ ॥ ಪುರಂದರವಿಠಲನ ಸಿರಿಪಾದ ಪದುಮಗಳ ॥ ೫ ॥

೬೯. ರಾಗ ಶಂಕರಾಭರಣ, ತ್ರಿಪುಟತಾಳ.

ಹ್ಯಾಗೆ ಮೆಚ್ಚಿಸಲಿ ಅರ್ಚಿಸಲಿ ನಿನ್ನ । ನಾಗಶಯನನೆ ನಾರದವಂದ್ಯನೆ ದೇವಾ ॥ ಪಲ್ಲ ॥ ಮಂಗಳಾಭಿಷೇಕಕೆ ಉದಕ ತರುವೆನೆನೆ । ಗಂಗೆಯಂಗುಷ್ಠದಿ ಪಡೆದಿರುವೇ ॥ ಸಂಗೀತ ಕೀರ್ತನೆ ಪಾಡುವೆನೆಂದರೆ ।

ತುಂಬುರು ನಾರದರು ಪಾಡುತಿಹರೋ ದೇವಾ ॥ ೧ ॥ ಪುಷ್ಪವ ತಂದು ನಿನಗರ್ಪಿಸುವೆನೆಂದರೆ । ಪುಷ್ಪ ಪಲ್ಲವಿಸಿದೆ ಹೊಕ್ಕಳಲೀ ॥ ಇಪ್ಪತ್ತೆಂಟು ಕೋಟಿ ದೇವರ್ಕಳದ । ಸೂಕ್ಷ್ಮ ನೈವೇದ್ಯನೀಡಲು ತೃಪ್ತನಾಗುವೀ ॥ ॥ ೨ ॥ ಕೋಟಿಸೂರ್ಯರ ಪ್ರಭೆ ಮಿಗಿಲಾದಾತನಿಗೊಂದು । ದೀಪವನು ಹಚ್ಚಿದರೆ ಬೆಳಕಹುದೇ ॥ ಸಾಟಿಗಾಣದೆ ಲಕ್ಷ್ಮಿ ಉರಸ್ಥಳವಾಗಿರೆ । ಲೋಷ್ಟ ಕಾಸು ಎಂತು ಕಾಣಿಕೆ ನೀಡಲೋ ॥ ೩ ॥ ಹಾಸಿಗೆಯನು ತಂದು ಹಾಸುವೆನೆಂದರೆ । ಶೇಷನ ಮ್ಯಾಲೆ ನೀ ಪವಡಿಸಿರ್ಪೆ ॥ ಬೀಸಣಿಗೆಯ ತಂದು ಬೀಸುವೆನೆಂದರೆ । ಬೀಸುತಿಹನು ಖಗ ತನ್ನ ಪಕ್ಷದಲೀ ॥ ೪ ॥ ನಿತ್ಯ ಗುಣಾರ್ಣವ ನಿಜಗುಣ ಪರಿಪೂರ್ಣ । ಸಚ್ಚಿದಾನಂದ ಸನಕಾದಿವಂದ್ಯ ॥ ಮುಕ್ತಿದಾಯಕ ನಮ್ಮ ಪುರಂದರವಿಠಲ । ಭಕ್ತಿದಾಯಕನೆಂದು ಸ್ತುತಿಸಿ ಕೊಂಡಾಡುವೆನೋ ॥ ೫ ॥ ಶ್ರೀಃ ॥

## ೭೦. ರಾಗ ಸೌರಾಷ್ಟ್ರ, ಅಟತಾಳ.

ಸಕಲ ದುರಿತಗಳ ಪರಿಹರ ಮಾಡಿದ್ಯೋ । ವೆಂಕಟೇಶ ॥ ಭಕುತಿಗೊಲಿದು ಬಂದು ಸಲಹಿ ಕಾಯಿದಿಯೋ । ವೆಂಕಟೇಶ ॥ ಪಲ್ಲ ॥ ಮತ್ಸ್ಯಾವತಾರದಿ ನಾಲ್ಕು ವೇದವ ತಂದ್ಯೋ । ವೆಂಕಟೇಶ ॥ ಪೃಥ್ವಿಧರನ ಬೆನ್ನೊಳಿಟ್ಟುತ್ತ ನೀ ನಿಂತಿದ್ಯೋ । ವೆಂಕಟೇಶ ॥ ೧ ॥ ಧರೆಯನೊಯ್ದನ್ನ ಕೋರೆ ದಾಡೆಲಿ ಕೊಂದ್ಯೋ । ವೆಂಕಟೇಶ ॥ ತರಳಗೊಲಿದು ನೀ ಕಂಬದಿಂದಲಿ ಬಂದ್ಯೋ । ವೆಂಕಟೇಶ ॥ ೨ ॥ ಭೂಮಿ ದಾನವ ನೀಡಿದವನ ಬಾಗಿಲ ಕ್ಯಾದ್ಯೋ । ವೆಂಕಟೇಶ ॥ ಭೂಮಿಪಾಲರಳಿದು ಭಾರ್ಗವನೆನಿಸಿದ್ಯೋ । ವೆಂಕಟೇಶ ॥ ೩ ॥ ದಶಶಿರನನು ಕುಟ್ಟಿ ಶಶಿಮುಖಿಯಳ ತಂದ್ಯೋ । ವೆಂಕಟೇಶ ॥ ಅಸುರೆಯ ಸಂಹರಿಸಿ ಕಂಸನ ಮಡುಹಿದ್ಯೋ । ವೆಂಕಟೇಶ ॥ ೪ ॥ ಅಧಮ ಜನರಿಗೆ ಬೋಧಿಸಿ ಬತ್ತಲೆ ನಿಂತ್ಯೋ । ವೆಂಕಟೇಶ ॥ ಕುದುರೆಯನೇರಿ ಕಲ್ಕಿರೂಪ ತಾಳಿದ್ಯೋ । ವೆಂಕಟೇಶ ॥ ॥ ೫ ॥ ಹರಿದಾಸರ ಮೇಲೆ ಹರಿದು ಬೇಗದಿ ಬಂದ್ಯೋ । ವೆಂಕಟೇಶ ॥ ವರದಪುರಂದರವಿಠಲ ಬಾ ನೀನೇ । ವೆಂಕಟೇಶ ॥ ೬ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೭೧. ರಾಗ ಆರಭಿ, ಅಟತಾಳ.

ಹರಿದಾಸರ ಸಂಗ ದೊರಕಿತು ಎನಗೀಗ । ಇನ್ನೇನಿನ್ನೇನೂ ॥ ವರ ಗುರು ಉಪದೇಶ ನೆರವಾಯ್ತು ಎನಗೆ । ಇನ್ನೇನಿನ್ನೇನೂ ॥ ಪಲ್ಲ ॥ ಮಾಯದ ಸಂಸಾರ ಮಮಕಾರ ತಗ್ಗಿತು । ಇನ್ನೇನಿನ್ನೇನೂ ॥ ತೋಯಜಾಕ್ಷನ ನಾಮ ಜಿಹ್ವೆಯೊಳ್ನೆಲಸಿತು । ಇನ್ನೇನಿನ್ನೇನೂ ॥ ೧ ॥ ಹಲವು ದೈವಗಳೆಂಬ ಹಂಬಲು ಬಿಟ್ಟಿತು । ಇನ್ನೇನಿನ್ನೇನೂ ॥ ಜಲಜನಾಭನ ಧ್ಯಾನ ಹೃದಯದೊಳ್ದೊರಕಿತು । ಇನ್ನೇನಿನ್ನೇನೂ ॥ ೨ ॥ ತಂದೆ ತಾಯಿ ಮುಚುಕುಂದವರದನಾದ । ಇನ್ನೇನಿನ್ನೇನೂ ॥ ಸಂದೇಹವಿಲ್ಲ ಮುಕುಂದ ದಯಮಾಡ್ದ । ಇನ್ನೇನಿನ್ನೇನೂ ॥ ೩ ॥ ಏನೆಂದು ಹೇಳಲಿ ಆನಂದ ಸಂಭ್ರಮ । ಇನ್ನೇನಿನ್ನೇನೂ ॥ ಆ ನಂದಗೋಪನ ಕಂದನ ಮಹಿಮೆಯ । ಇನ್ನೇನಿನ್ನೇನೂ ॥ ೪ ॥ ಎನ್ನ ವಂಶಗಳೆಲ್ಲ ಪಾವನವಾದವು । ಇನ್ನೇನಿನ್ನೇನೂ ॥ ಚಿನ್ಮಯ ಪುರಂದರವಿಠಲಯ್ಯ ದೊರಕಿದ । ಇನ್ನೇನಿನ್ನೇನೂ ॥ ೫ ॥ ಶ್ರೀಃ ॥

## ೭೨. ರಾಗ ಮೋಹನ, ಅಟತಾಳ.

ನಂದಗಮನೆ ಇವನ್ಯಾರೆ ಪೇಳಮ್ಮ । ಮಂದರಧರ ಗೋವಿಂದ ಕಾಣಮ್ಮ ॥ ಪಲ್ಲ ॥ ಕೆಂದಳಿರುನಖ ಶಶಿಬಿಂಬ ಪದಪದ್ಮ । ಅಂದುಗೆ ಇಟ್ಟವನ್ಯಾರೆ ಪೇಳಮ್ಮ ॥ ಅಂದು ಕಾಳಿಂಗನ ಪೆಡೆಯ ತುಳಿದ ದಿಟ್ಟ । ನಂದನ ಕಂದ ಮುಕುಂದ ಕಾಣಮ್ಮ ॥ ೧ ॥ ಉಡುಗೆ ಪೀತಾಂಬರ ನಡುಗೆ ಹೊನ್ನುಡುದಾರ । ಕಡಗ ಕಂಕಣವಿಟ್ಟವನ್ಯಾರಮ್ಮ ॥ ಮಡದಿ ಕೇಳ್ ಸಕಲ ಲೋಕಂಗಳ ಕುಕ್ಷಿಯೊ । ಳೊಡನೆ ತೋರಿದ ಜಗದೊಡೆಯ ಕಾಣಮ್ಮ ॥ ೨ ॥ ನೀರದ ನೀಲದಂತೆಸವ ವಕ್ಷದಿ ಕೇ । ಯೂರ ಹಾರವನಿಟ್ಟವನ್ಯಾರಮ್ಮ ॥ ನೀರೆ ಕೇಳು ನಿರ್ಜರರಾದವರಿಗೆ । ಪ್ರೇರಿಸಿ ಫಲವಿತ್ತುದಾರಿ ಕಾಣಮ್ಮ ॥ ೩ ॥ ಶಂಖಚಕ್ರವು ಗದೆ ಪದ್ಮ ಕಯ್ಯೊಳಗಿಟ್ಟ । ಲಂಕಾರಿಸುವನೀತನ್ಯಾರಮ್ಮ ॥ ಪಂಕಜಮುಖಿ ಶ್ರೀಭೂದೇವಿಯರರಸನು । ಶಂಕೆಯಿಲ್ಲದೆ ಗೋಪಿತನಯ ಕಾಣಮ್ಮ ॥ ೪ ॥ ಕಂಬು

ಕಂಧರ ಕರ್ಣಾಲಂಬಿತಕುಂಡಲ । ಅಂಬುಜ ಮುಖದವನ್ಯಾರೆ ಹೇಳ ಮ್ಮ ॥ ರಂಭೆ ಕೇಳೀತ ಪುರಂದರವಿಠಲ । ನಂಬಿದ ಭಕ್ತ ಕುಟುಂಬಿ ಕಾಣಮ್ಮ ॥ ೫ ॥ ಶ್ರೀಃ ॥

## ೭೩. ರಾಗ ಧನಾಸಿ, ಆದಿತಾಳ.

ಕರುಣಾಕರ ನೀನೆಂಬುವದೇತಕೋ । ಭರವಸವಿಲ್ಲೆನಗೆ ॥ ಪಲ್ಲ ॥ ಪರಿ ಪರಿಯಲಿ ಈ ನರಜನ್ಮವನಿತ್ತು । ತಿರುತಿರುಗಿಸಿ ಮನ ಕರಗಿಸುವುದಕೆ ॥ ॥ ಅನುಪಲ್ಲ ॥ ಕರಿ ಧ್ರುವ ಬಲಿ ಪಾಂಚಾಲೆ ಅಹಲ್ಯೆಯ । ಪೊರೆದವ ಭವದಲಿ ನೀನಂತೆ ॥ ಅರಿತು ವಿಚಾರಿಸಿ ನೋಡಲದೆಲ್ಲವು । ಮರೆವುದೀಗ ಕಂತೆಗ ಳಂತೆ ॥ ೧ ॥ ಕರುಣಾಕರ ನೀನಾದರೆ ಈಗಲೆ । ಕರಪಿಡಿದೆನ್ನನು ನೀ ಕಾಯೋ ॥ ಸರಸಿಜಾಕ್ಷನೆ ಅರಸು ನೀನಾದರೆ । ದುರಿತಗಳೆನ್ನನು ಪೀಡಿ ಪುದುಂಟೆ ॥ ೨ ॥ ಮರಣಕಾಲದಲಿ ಅಜಮಿಳಗೊಲಿದಿ ನೀ । ಗರುಡಧ್ವ ಜನೆಂಬಾ ಬಿರುದಿನಿಂದಾ ॥ ವರ ಬಿರುದುಗಳೆನಗಿರಬೇಕಾದರೆ । ತ್ವರಿತದಿ ಸಲಹೋ ಪುರಂದರವಿಠಲ ॥ ೩ ॥ ಶ್ರೀಃ ॥

## ೭೪. ರಾಗ ಕಲ್ಯಾಣಿ, ತ್ರಿಪುಟತಾಳ.

ಬಂದನೇನೆ ರಂಗ ಬಂದನೇನೆ ಎನ್ನ । ತಂದೆ ಬಾಲಕೃಷ್ಣ ನವನೀತ ಚೋರಾ ॥ ಪಲ್ಲ ॥ ಗಿಲಿ ಗಿಲಿ ಗಿಲಿಯೆಂಬೊ ಹೊನ್ನ ಕಡಗ ಗೆಜ್ಜೆ । ಹೊಳ ಹೊಳ ಹೊಳವ ಪಾದವನೂರುತಾ ॥ ನಲಿ ನಲಿದಾಡುತ ಉಂಗು ರದರಳೆಲೆ । ಥಳ ಥಳ ಥಳ ಥಳಾ ಥಳ್ಳನೆ ಹೊಳೆವುತಾ ॥ ೧ ॥ ಕಿಣಿ ಕಿಣಿ ಕಿಣಿಯೆಂಬೊ ಕರದಿ ಕಂಕಣಬಳೆ । ಝುಣ ಝುಣ ಝುಣವೆಂಬೊ ನಡುವಿನ ಘಂಟೆ ॥ ಧಣಿ ಧಣಿ ಧಣಿರೆಂಬೊ ಪಾದವ ನಡಿಸುತಾ । ಮಣಿ ಮಣಿ ಮಣಿ ಎಂದಾಡುತ ಕೃಷ್ಣ ॥ ೨ ॥ ಹಿಡಿ ಹಿಡಿ ಹಿಡಿಯೆಂದು ಪುರಂದ ರವಿಠಲನ । ದುಡು ದುಡು ದುಡು ದುಡುಕಿ ಓಡುತ ॥ ನಡಿ ನಡಿ ನಡಿ ಯೆಂದು ಮೆಲ್ಲನೆ ಪಿಡಿಯಲು । ಬಿಡಿ ಬಿಡಿ ಬಿಡಿ ಬಿಡಿ ದಮ್ಮಯ್ಯ ಎನುತಾ ॥ ೩ ॥ ಶ್ರೀಃ ॥

### ೭೫. ರಾಗ ಆನಂದಭೈರವಿ, ಅಟತಾಳ.

ತ್ರರಳೆ ರನ್ನೆ ಕಪ್ಪು ಮಯ್ಯವ ಯಾತರ ಚೆಲುವನೆ । ಕರಿಯ ಜಡೆಯ ಜೋಗಿಗಿಂತ ಉತ್ತಮನೇನೇ ॥ ಪಲ್ಲ ॥ ಜಲಧಿಯೊಳು ವಾಸವೇನು ಮನೆಗಳಿಲ್ಲವೆ ॥ ಲಲನೆ ಕೇಳು ಕಾಡಿಗಿಂತ ಲೇಸು ಅಲ್ಲವೇ ॥ ೧ ॥ ಮಂದರಗಿರಿಯ ಪೊತ್ತುದು ಏನು ಚಂದವೆ ॥ ಕಂದನೊಯ್ದು ಅಡವಿಯೊಳಿಡುವುದಾವ ನ್ಯಾಯವೇ ॥ ೨ ॥ ಮಣ್ಣನಗೆದು ಬೇರ ಮೆಲುವದೇನು ಸ್ವಾದುವೆ ॥ ತನ್ನ ಕರದಿ ಕಪಾಲ ಪಿಡಿವುದಾವ ನ್ಯಾಯುವೇ ॥ ೩ ॥ ಮುತ್ತಿನ ಹಾರ ಇರಲು ಕರುಳ ಮಾಲೆ ಚಂದವೆ ॥ ನಿತ್ಯ ರುಂಡಮಾಲೆ ಧರಿಸೋದದು ನ್ಯಾಯುವೇ ॥ ೪ ॥ ಗಿಡ್ಡನಾಗಿ ಬೆಳೆದು ಅಳೆವುದೇನು ನ್ಯಾಯುವೆ ॥ ಗುಡ್ಡದ ಮಗಳ ತಂದೆಗೆ ಮುನಿವೋದು ನ್ಯಾಯುವೇ ॥ ೫ ॥ ಪಿತನ ಮಾತು ಕೇಳಿ ಮಾತೆಯ ಶಿರವನಳಿವರೆ ॥ ಶಿತಿಕಂಠನಾಗಿ ಇರುವದದಾವ ನ್ಯಾಯುವೇ ॥ ೬ ॥ ಕೋಡಗ ಕರಡಿ ಕಪಿಗಳ ಹಿಂಡು ಬಂಧು ಬಳಗವೆ ॥ ಕೂಡಿ ಬಂದ ಭೂತಬಳಗ ಜ್ಞಾತಿ ಸಂಬಂಧವೇ ॥ ೭ ॥ ಹಾವಿನ ಹೆಡೆಯ ತುಳಿವರೇನೆ ಅಂಜಿಕಿಲ್ಲವೆ ॥ ಹಾವು ಮೈಗೆ ಮುತ್ತಿರಲು ಹ್ಯಾಗೆ ಜೀವಿಸನೇ ॥ ೮ ॥ ಬತ್ತಲಿರುವರೇನು ಅವಗೆ ನಾಚಿಕಿಲ್ಲವೆ ॥ ಸತ್ತ ಗಜದ ಚರ್ಮ ಹೊದಿಯಲು ಹೇಸಿಕಿಲ್ಲವೇ ॥ ೯ ॥ ಉತ್ತಮ ತೇಜಿಯಿರಲು ಧರೆಯೊಳು ಹದ್ದನೇರ್ವರೆ ॥ ಎತ್ತಿನ ಬೆನ್ನನೇರಿದವರು ಬುದ್ಧಿವಂತರೇ ॥ ೧೦ ॥ ಹರಿಹರರಿಗೆ ಸಾಮ್ಯವೇನೆ ಪೇಳೆ ರುಗ್ಮಿಣಿ ॥ ಪುರಂದರವಿಠಲ ಸರ್ವೋತ್ತಮ ಕೇಳೆ ಭವಾನೀ ॥ ೧೧ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

### ೭೬. ರಾಗ ಸಾರಂಗ, ಆದಿತಾಳ.

ಬಂದದ್ದೆಲ್ಲ ಬರಲಿ । ಗೋ । ವಿಂದನ ದಯ ನಮಗಿರಲಿ ॥ ಪಲ್ಲ ॥ ಮಂದರಧರ ಗೋವಿಂದ ಮುಕುಂದನ । ಸಂದರುಶನ ಒಂದಿದ್ದರೆ ಸಾಲದೇ ॥ ಅನುಪಲ್ಲ ॥ ಆರು ಅರಿಯದಿರಲೆನ್ನಾ | ಮು । ರಾರಿಯು ಒಳಗೆ ಪ್ರಸನ್ನಾ । ಘೋರ ದುರಿತದ ಬನ್ನಾ । ಭಯ । ಹಾರಿ ಗುಣಾಂಬುಧಿ ಘನ್ನಾ ॥ ಶ್ರೀರ

ಮಣನ ಶ್ರೀಚರಣ ಸೇವಕರಿಗೆ। ಕ್ರೂರ ಯಮನು ಶರಣಾಗತನಲ್ಲದೆ॥೧॥
ಅರಗಿನ ಮನೆಯೊಳಗಂದೂ। ಪಾಂಡ। ವರನು ಕೊಲಲುಬೇಕೆಂದೂ।
ದುರುಳ ಕೌರವ ಕಪಟದಿಂದಾ। ಇರಲು ಆ ಕ್ಷಣದಿಂದಾ॥ ಹರಿ ಕೃಪೆ
ಅವರಲ್ಲಿದ್ದ ಕಾರಣ ಬಂದ। ದುರಿತ ಭಯವು ಬಯಲಾಯಿತಲ್ಲವೆ॥೨॥
ಸಿಂಗನ ಹೆಗಲೇರಿ ಸಾಗೆ। ಕರಿ। ಭಂಗವೇಕೆ ಮತ್ತವಗೆ। ರಂಗನ ದಯ
ವುಳ್ಳವಗೆ। ಭವ। ಭಂಗದ ಬಯಕೆಯ ಹಂಗೆ॥ ಮಂಗಳಮಹಿಮ
ಪುರಂದರವಿಠಲ। ರಂಗನ ದಯವೊಂದಿದ್ದರೆ ಸಾಲದೆ॥೩॥ ಶ್ರೀಃ॥

## ೭೭. ರಾಗ ಕಾಂಬೋಧಿ, ಝಂಪೆತಾಳ.

ಧರ್ಮವೇ ಜಯವೆಂಬ ದಿವ್ಯ ಮಂತ್ರ। ಮರ್ಮವನು ತಿಳಿದು ಆಚರಿ
ಸುವದು ಕೇಳಿ॥ ಪಲ್ಲ॥ ವಿಷವನುಣಿಸಿದಗೆ ಷಡ್ರಸವನುಣಿಸಲು ಬೇಕು।
ಅಸೂಯ ಪಡುವನ ಪೋಷಿಸಲು ಬೇಕು॥ ಹುಸಿದು ಮನೆ ಕೊಂಬು
ವನ ಹಾಡಿ ಹರಸಲು ಬೇಕು। ಅಸಿಯಲಿರಿದವನ ಮಗನ್ನೋಸರಿಸಲು
ಬೇಕು॥೧॥ ಎಂದಿಗೂ ಸೇರದವನ ಹಾಡಿ ಹರಸಲು ಬೇಕು। ಕೊಂದ
ವನ ಗೆಳೆತನವ ಮಾಡಬೇಕು॥ ಹಿಂದೆ ನಿಂದಿಸುವವನ ವಂದಿಸುತ್ತಿರ
ಬೇಕು। ಬಂಧನದೊಳಿಟ್ಟವನ ಬಿಡಿಸಬೇಕು॥೨॥ ಕೊಂಡೊಯ್ದು
ಕೊಲಿಸುವರ ಕೊಂಡಾಡುತಿರಬೇಕು। ಕಂಡರಾಗದವನ ಹೊಗಳಬೇಕು॥
ಕಂಡು ಭಜಿಸಿರೋ ನಮ್ಮ ಪುರಂದರವಿಠಲನ್ನ ಅ। ಖಂಡ ಮಹಿಮೆಯ
ನರಿತು ಅರಿಯದಿರಬೇಕು॥೩॥ ಶ್ರೀಃ॥

## ೭೮. ರಾಗ ಹಿಂದುಸ್ಥಾನ್‌ದೇಶಿ, ಅಟತಾಳ.

ಹಿಡಕೊ ಬಿಡಬೇಡ। ರಂಗನ ಪಾದ। ಹಿಡಕೊ ಬಿಡಬೇಡ॥ ಪಲ್ಲ॥
ಹಿಡಕೊ ಬಿಡಬೇಡ ಕೆಡುಕ ಕಾಳಿಂಗನ। ಮಡುವ ಧುಮುಕಿ ಪಾವ।
ಹೆಡೆಯ ತುಳಿದ ಪಾದ॥ ಅನುಪಲ್ಲ॥ ಮಕ್ಕಳೊಳಗೆ ಕೂಡಿ ಮನೆ ಮನೆ
ಗಳ ಪೊಕ್ಕು। ಸಕ್ಕರೆ ನೊರೆಹಾಲು ಸವಿದವನಾ॥ ಬೆಕ್ಕಿನ ಮೇಲಿಟ್ಟು
ಬೆಣ್ಣೆಯ ತಾ ಮೆದ್ದು। ಸಿಕ್ಕದೆ ಚಿಗಿದು ಓಡುವ ಕೃಷ್ಣನ ಪಾದ॥೧॥
ಕಾಳರಕ್ಕಸರೊಳು ಕದನ ಬೇಡೆಂದರೆ। ಹೇಳಿದ ಮಾತನು ಕೇಳದನಾ॥

ಖೂಳ ರಕ್ಕಸನ್ನ ಹಾರಿ ಹೋಗಿ ಬೇಗ । ಘಾಳಿಲಿ ಮುರಿದಿಟ್ಟ ಗಯ್ಯಾಳಿ ಕೃಷ್ಣಯ್ಯನ ॥ ೨ ॥ ಆಗಸನ ಮಡುಹಿದ ಆಸೆಯ ಕೆಡಹಿದ । ಸತ್ರಾಜಿತ ನಿಗೆ ವರವಿತ್ತನಾ ॥ ಅತ್ರಿಮುನೀಶಗೆ ಅರ್ತಿಯ ಸಲಹಿದ । ಸತ್ಯಭಾಮೆಯ ಕಾಂತ ನಿತ್ಯ ವಿನೋದನ ॥ ೩ ॥ ಜೇರಿಗೆ ಬಿಲ್ಲವು ಹಿಡಿದು ಅಂಬಿಕೆ ಯೊಳು । ಸಾರಿ ಬರುವ ರುಗ್ಮಿಣಿಯ ಕಂಡು ॥ ಹಾರಿ ಹೋಗಿ ಬೇಗ ರುಗ್ಮನ ಹಿಡಕಯ್ಯ । ತೇರಿಗೆ ಕಟ್ಟಿದ ಜಾರನ ಚೋರನ ॥ ೪ ॥ ನರಗುರಿ ದೇಹವು ಸ್ಥಿರವೆಂದು ನೆಚ್ಚದೆ । ಮರತಿಯಾ ಹೆಡತಲೆ ಮೃತ್ಯುವಿನಾ ॥ ವರ ಧ್ರುವ ಪ್ರಹಲ್ಲಾದ ಪಾಂಚಾಲಿ ಸಲಹಿದ । ವರದ ಪುರಂದರವಿಠಲ ರಾಯನ ॥ ೫ ॥ ಶ್ರೀಃ ॥

## ೭೯. ರಾಗ ಸುರುಟಿ, ಆದಿತಾಳ.

ನಾಚಿಕೆಕೊಳಬೇಡ । ಮನದಲಿ । ಯೋಚಿಸಿ ಕೆಡಬೇಡ ॥ ನೀಚ ವೇನೋ ಶ್ರೀಅಚ್ಯುತನೋಲಗ । ಮೆಚ್ಚಿ ಕೊಟ್ಟದೆ ನಿನಘೆಚ್ಚಿನ ಪದ ವಿಯ ॥ ಪಲ್ಲ ॥ ಹರಿಹರಿ ಎಂದೊದರೋ । ಹತ್ತಿದ । ಪಾಪಗಳಿಗೆ ಬೆದರೋ ॥ ನೀರಜಾಕ್ಷ ನಿರ್ಜರಪತಿ ಕೃಷ್ಣನ । ಭಾರಿ ಭಾರಿ ಭೋರಿಡುತಲಿ ಕುಣಿಯೋ ॥ ೧ ॥ ಯಾರ ಗೊಡವೆ ಯೇನೋ । ನರಕದ । ಬಾಧೆ ತಪ್ಪುವದೇನೋ ॥ ಸಾರಿ ಸಾರಿ ಸರ್ವೇಶನ ನಾಮವ । ಸೇರಿ ಸೇರಿ ಕೈಮುಗಿದು ಕೊಂಡಾಡೋ ॥ ೨ ॥ ಭಕ್ತಜನರ ನೋಡೋ । ಭವ ಭಯ । ಭಂಗಗಳೀಡ್ಯಾಡೋ ॥ ಮುಕ್ತಿದಾಯಕ ಶ್ರೀಪುರಂದರವಿಠಲನ । ಭಕ್ತಿಯಿಂದಲಿ ಪಾಡುತೆ ಕುಣಿಯೋ ॥ ೩ ॥ ಶ್ರೀಃ ॥

## ೮೦. ರಾಗ ಧನಾಸಿ, ಆದಿತಾಳ.

ಹರಿ ಹರಿ ಹರಿ ಹರಿ ಎಂಬೋ ನರಗಿನ್ನೇತರ ಭಯವಿಲ್ಲಿಲ್ಲಲ್ಲ ॥ ಪಲ್ಲ ॥ ಧ್ರುವಗೊಲಿದವ ಶ್ರೀಶಾ ಹುಸ್ಸೇನ್ । ಧ್ರುವಪದವಿತ್ತನೆ ಬಾ ಹುಸ್ಸೇನ್ ॥ ಭಾವಶುದ್ಧಿ ಯಿರುವಲ್ಲ್ಯಲ್ಲಿ । ಭವಭಯವೆಂಬೊದಿಲ್ಲಲ್ಲ ॥ ೧ ॥ ಕರಿಮೊರೆ ಕೇಳಿದ ಶ್ರೀಶ ಹುಸ್ಸೇನ್ ॥ ಹಿರಿಯ ಭಕ್ತಿಗಳಿಂದಲಿ । ದುರಿತ ಭಯ

ನಮಗಿಲ್ಲಲ್ಲ ॥ ೨ ॥ ಕರುಣಾಕರ ಶ್ರೀಶಾ ಹುಸ್ಸೇನ್ । ಗರುಡ ವಾಹನ ನೆಂಬ ಹುಸ್ಸೇನ್ ॥ ಅರಿತು ಬಂದೆನಲ್ಲ್ಯಲ್ಲಿ । ಪುರಂದರವಿಠಲನಲ್ಲದಿ ಲ್ಲಲ್ಲಾ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೪೧. ರಾಗ ಪೂರ್ವಿಕಲ್ಯಾಣಿ, ಅಟತಾಳ.

ಒಲ್ಲನೋ । ಶ್ರೀಹರಿ । ಕೊಳ್ಳನು । ಎಲ್ಲ ಸಾಧನವಿದ್ದು ತುಲಸಿ ಇಲ್ಲದ ಪೂಜೆ ॥ ಪಲ್ಲ ॥ ಸಿಂಧು ಶತಕೋಟಿ ಗಂಗೋದಕವಿದ್ದು । ಗಂಧ ಸುಪರಿ ಮಳವಸ್ತುವಿದ್ದು ॥ ಚಂದುಳ್ಳಾಭರಣಗಳು ದೀಪಗಳಿದ್ದು । ವೃಂದಾವ ನದ ಶ್ರೀತುಲಸಿಯಿಲ್ಲದ ಪೂಜೆ ॥ ೧ ॥ ದಧಿ ಕ್ಷೀರ ಮೊದಲಾದ ಅಭಿಷೇ ಕಗಳಿದ್ದು । ಮಧುಪರ್ಕ ಪಂಚೋಪಚಾರವಿದ್ದು ॥ ಮುದದಿಂದ ಶ್ರೀಮು ದ್ದುಕೃಷ್ಣನ ಪೂಜೆಗೆ । ಸದಮಲಳಾದ ಶ್ರೀತುಲಸಿಯಿಲ್ಲದ ಪೂಜೆ ॥ ೨ ॥ ಮಂತ್ರ ಮಹಮಂತ್ರ ಪುರುಷಸೂಕ್ತಗಳಿದ್ದು । ತಂತು ತಪ್ಪದೆ ತಂತ್ರ ಸಾರವಿದ್ದು ॥ ಸಂತತ ಸುಖಸಂಪೂರ್ಣನ ಪೂಜೆಗೆ । ಶಾಂತೆಯಾದ ಶ್ರೀ ತುಲಸಿಯಿಲ್ಲದ ಪೂಜೆ ॥ ೩ ॥ ಕಮಲ ಮಲ್ಲಿಗೆ ಜಾಜಿ ಸಂಪಿಗೆ ಕ್ಯಾದಿಗೆ । ವಿಮಲ ಘಂಟೆ ಪಂಚ ವಾದ್ಯವಿದ್ದು ॥ ಅಮಲ ಪಂಚಾಮೃತ ದಿವ್ಯಾನ್ನ ಗಳಿದ್ದು । ಕಮಲನಾಭನು ಶ್ರೀತುಲಸಿಯಿಲ್ಲದ ಪೂಜೆ ॥ ೪ ॥ ಪೂಜೆಯ ಮಾಡಿರೋ ತುಲಸಿಮಂಜರಿಯಿಂದ । ಮೂಜಗದೊಡೆಯ ಮುರಾರಿ ಯನ್ನಾ ॥ ರಾಜಾಧಿರಾಜೆಂಬೊ ಮಂತ್ರ ಪುಷ್ಪದಿಂದ । ಪೂಜೆಯ ಗೊಂಬ ಶ್ರೀಪುರಂದರವಿಠಲನು ॥ ೫ ॥ ಶ್ರೀಃ ॥

## ೪೨. ರಾಗ ಶಂಕರಾಭರಣ, ಅಟತಾಳ.

ಮಣ್ಣಿಂದಾ ಕಾಯಾ ಮಣ್ಣಿಂದಾ ॥ ಪಲ್ಲ ॥ ಮಣ್ಣಿಂದ ಸಕಲ ದರು ಶನಗಳೆಲ್ಲ । ಮಣ್ಣಿಂದ ಸಕಲ ವಸ್ತುಗಳೆಲ್ಲ ॥ ಮಣ್ಣ ಬಿಟ್ಟವರಿಗೆ ಆಧಾರ ವಿಲ್ಲ । ಅಣ್ಣಗಳಿರೆಲ್ಲರು ಕೇಳಿರಯ್ಯ ॥ ಅನುಪಲ್ಲ ॥ ಅನ್ನ ಉದಕ ಊಟ ವೀಯೋದು ಮಣ್ಣು । ಬಣ್ಣ ಭಂಗಾರ ಬೊಕ್ಕಸವೆಲ್ಲ ಮಣ್ಣು ॥ ಉನ್ನಂತ

ವಾದ ಪರ್ವತವೆಲ್ಲ ಮಣ್ಣು । ಕಣ್ಣು ಮೂರುಳ್ಳನ ಕೈಲಾಸ ಮಣ್ಣು ॥ ॥ ೧ ॥ ದೇವರ ಗುಡಿ ಮಠ ಮನೆಯೆಲ್ಲ ಮಣ್ಣು । ಆವಾಗ ಆಡುವ ಮಡಿಕೆಯು ತಾ ಮಣ್ಣು ॥ ಕೋವಿದರಸರ ಕೋಟೆಗಳೆಲ್ಲ ಮಣ್ಣು । ಪಾವನ ಗಂಗೆಯು ತಡಿಯೆಲ್ಲ ಮಣ್ಣು ॥ ೨ ॥ ಭತ್ತ ಭರಣ ಧಾನ್ಯ ಬೆಳೆವುದೆ ಮಣ್ಣು । ಸತ್ತವರನು ಹೂಳಿ ಸುಡುವುದೆ ಮಣ್ಣು ॥ ಉತ್ತಮವಾದ ವೈಕುಂಠವೆ ಮಣ್ಣು । ಪುರಂದರವಿಠಲನ್ನ ಪುರವೆಲ್ಲ ಮಣ್ಣು ॥ ೩ ॥

೮೩. ರಾಗ ಶಂಕರಾಭರಣ, ಅಟತಾಳ.

ಸುಮ್ಮನೆ ಕಾಲವ ಕಳೆವರೆ । ಯಮ । ಧರ್ಮರಾಯನ ದೂತರೆಳೆಯರೆ ॥ ಪಲ್ಲ ॥ ಬಾಲನಾಗಿದ್ದಾಗ ಬಹುಲೀಲೆ । ಮತ್ತೆ । ಲೋಲನಾಗಿ ಬಾಳಿದ ಮೇಲೆ ॥ ಮೂಳ ವೃದ್ಧಾಪ್ಯ ಬಂದಮೇಲೆ । ಇನ್ನು । ಬಾಳುವದೆಲ್ಲ ಆ ಮೇಲೆ ॥ ೧ ॥ ಇಂದಿನ ಹಮ್ಮು ನಾಳೆಗೆ ಇಲ್ಲ । ಭವ । ಬಂಧನದೊಳು ಸಿಕ್ಕಿದೆಯಲ್ಲ ॥ ಮುಂದನರಿತು ನಡೆವುದಕ್ಕಿಲ್ಲ । ಮೃತ್ಯು । ಬಂದಾಗ ಬಿಡಿಸಿಕೊಳ್ಳುವರಿಲ್ಲ ॥ ೨ ॥ ಮನೆ ಮನೆ ವಾರ್ತೆಯು ಘನವಲ್ಲ । ಈ । ಮನುಜರ ವಾರ್ತೇನು ಸ್ಥಿರವಲ್ಲ ॥ ವನಜಸಂಭವಗೆ ನಿಶ್ಚಯವಿಲ್ಲ । ಮುಂದೆ । ಹನುಮಂತ ಪಟ್ಟಕೆ ಬಾಹೊನಲ್ಲ ॥ ೩ ॥ ಮಡದಿ ಮಕ್ಕಳ ಕೂಡಿದ ಬಾಳು । ತನ್ನ । ಒಡಲಿಗಾತರದ ಬಂಕುಗಳು ॥ ಬಿಡದೆ ಸಂಕೀರ್ತನೆ ಮಾಡೇಳು । ಮುಂದೆ । ನುಡಿ ಬಾರದೇ ಜನುಮ ಬೀಳು ॥ ೪ ॥ ನರಿ ನಾಯಿ ಜನ್ಮವು ಬಾರದೆ । ಮುಂದೆ । ನರಜನ್ಮದಲ್ಲಿ ಬಂದು ಸೇರದೆ ॥ ಸ್ಮರಣೆಯನ್ನು ಮಾಡಲಾರದೆ । ಸುಮ್ಮ । ನಿರಲು ಪಾಪದ ವಿಷವೇರದೆ ॥ ೫ ॥ ಪರಮ ನೀಚ ಅಜಾಮಿಳ । ತನ್ನಾ । ನಾರಗನೆಂದು ಮಗನಾ ಕರಿಯೆ ॥ ಕರುಣದಿ ವೈಕುಂಠಪದವಿತ್ತಾ । ನಮ್ಮ । ಪುರಂದರವಿಠಲನ್ನ ನೆನೆ ಬೇಗ ॥ ೬ ॥ ಶ್ರೀಃ ॥

೮೪. ರಾಗ ಸೌರಾಷ್ಟ್ರ, ರೂಪಕತಾಳ.

ರಾಮಕೃಷ್ಣರು ಮನೆಗೆ ಬಂದರು ಬಾಗಿಲ ತೆರೆಯಿರೋ ॥ ಕಾಮಧೇನು ಬಂದಂತಾಯ್ತು ಸುಖವ ಪಡೆಯಿರೋ ॥ ಪಲ್ಲ ॥ ಚೆಂಡು ಬೊಗರಿ ಚಿಣ್ಣೆ

ಕೋಲು ಗಜುಗನಾಡುತಾ। ದುಂಡು ಮಲ್ಲಿಗೆ ತುರುಬಿ ಕೊಳಲನೂದಿ ಪಾಡುತಾ ॥ ದಿಂಡೆವೆಂಗಳ ಮುದ್ದು ಮೊಗದ ಸೊಗಸು ನೋಡುತಾ। ಬಂಡುಮಾಡಿ ಭಾಮೆಯರೊಡನೆ ಸರಸವಾಡುತಾ ॥ ೧ ॥ ಮಕರ ಕುಂಡಲ ನೀಲ ಮುತ್ತಿನ ಚೌಕವಿಡುತಲಿ। ಕಂಕಣ ಕಡಗ ತೋಳ ಬಂಧಿ ತೊಡಿಗೆ ತೊಡುತಲಿ ॥ ಮುಖದ ಕಮಲ ಮುಗುಳು ನಗೆಯು ಸುಖವ ಕೊಡುತಲಿ। ಸುಕುಮಾರ ಸುಂದರ ವದನ ಸೊಗಸು ತೋರುತಲಿ ॥ ೨ ॥ ಹೊಕ್ಕಳಲ್ಲಿ ಅಜನ ಪಡೆದ ದೇವದೇವನು। ಚಿಕ್ಕ ಅಂಗುಷ್ಠದಲ್ಲಿ ಗಂಗೆಯ ಪಡದಾತನು ॥ ಮಕ್ಕಳ ಮಾಣಿಕ್ಯ ಗುರು ಪುರಂದರ ವಿಠಲರಾಯನು। ಅಕ್ಕರದಿಂದ ಭಕ್ತರಿಗೆ ಮುಕ್ತಿದಾತನು ॥ ೩ ॥

## ೮೫. ರಾಗ ಸೌರಾಷ್ಟ್ರ, ಅಟತಾಳ.

ನಿನ್ನ ಮಗನು ಮುದ್ದು ನಿನಗಾದರೆ ಗೋಪಿ ಯಾರಿಗೇನೆ। ಅಮ್ಮ। ಎನ್ನ ಕೂಡೆ ತಾ ಸರಸವಾಡುತಾನೆ ಸಾರು ನೀನೆ ॥ ಪಲ್ಲ ॥ ಹೆಚ್ಚಿನ ಸತಿಯರ ಕಚ್ಚೆಯ ಬಿಚ್ಚುವ ಹುಚ್ಚನೇನೆ। ಅಮ್ಮ। ಇಚ್ಛೆಯರಿತು ನಮ್ಮಗಲ್ಲವ ಕಚ್ಚುವ ನಲ್ಲನೇನೆ ॥ ೧ ॥ ಚೆಂಡೆಂದು ಹೆಂಗಳ ಕುಚಗಳ ಪಿಡಿವರೆ ಗಂಡನೇನೆ। ಅಮ್ಮ। ಕಂಡಲ್ಲಿ ಉದ್ದಂಡತನವ ಮಾಡುತಾನೆ ಪುಂಡನೇನೆ ॥ ೨ ॥ ಹೊಸ ಕೂಟವರಿತು ಹಾಸಿಕೆಯನು ಹಾಕುವ ಶಿಶುವು ಯೇನೆ। ಅಮ್ಮ। ಅಸಹಾಯಶೂರ ಶ್ರೀಪುರಂದರವಿಠಲರಾಯ ಕಾಣೆ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು

## ೮೬. ರಾಗ ಪೂರ್ವಿ, ಅಟತಾಳ.

ಸುಣ್ಣವಿಲ್ಲ ಭಾಗವತರೆ। ನುಣ್ಣನೆ ಗೋಡೆಯ ನಿನ್ನೆ ತೊಡೆದು ಬಿಟ್ಟೆ ॥ ಪಲ್ಲ ॥ ವೀಳ್ಯ ಹಾಕುವನಲ್ಲ। ವ್ಯಾಧಿಸ್ಥ ಗಂಡನು। ಬಾಳು ಸಟೆ ಎನ್ನ ಬಾಯಿ ನೋಡೀ ॥ ಹಾಳು ಮನೆಯು ಹೊಕ್ಕ ಒಡಲು ಉರಿಯುತಿದೆ। ಹೇಳಿ ಈ ಬದುಕನ್ನು ಪ್ರಯೋಜನವೇನು ॥ ೧ ॥ ಮುದ್ದು ತಿಂದು

ತಿಂದು ಮನೆಯೆಲ್ಲ ಬರಿದಾಗಿ । ಹೊದ್ದಿತು ಮೂದೇವಿ ಮೈದುನಗೆ ॥ ಮದ್ದಿಕ್ಕೊ ಸಂಚಿಯ ಭಂಗಿ ಮುಕ್ಕಿ ಭಾವ । ಬಿದ್ದುಕೊಳ್ಳುತಾನೆ ಒಳಗೆ ಕದವ ಮುಚ್ಚಿ ॥ ೨ ॥ ತೊನ್ನ ಬಡುಕ ಮಾವ ಅನ್ಯಕಾರಿ ಅತ್ತೆ । ಗನ್ನ ಘಾತಕಿ ರಂಡೆ ಅತ್ತಿಗೆಯು ॥ ಎನ್ನ ಗೋಳು ತಾನೆ ನಾಶವೆಂದಿಗಹುದೊ। ಪನ್ನಂಗಶಯನ ಶ್ರೀಪುರಂದರವಿಠಲ ॥ ೩ ॥ ಶ್ರೀಃ ॥

## ೮೭. ರಾಗ ಮಧ್ಯಮಾವತಿ, ಆದಿತಾಳ.

ಬಣ್ಣಿಸಿ ಗೋಪಿ ತಾ ಹರಸಿದಳು । ಎಣ್ಣೆಯನೊತ್ತುತ ಯದುಕುಲ ತಿಲಕನ ॥ ಪಲ್ಲ ॥ ಆಯುಷ್ಯವಂತನಾಗು ಅತಿ ಬಲ್ಲಿದನಾಗು । ಮಾಯದ ಖಳಮರ್ದನನಾಗು ॥ ರಾಯರ ಪಾಲಿಸೊ ರಕ್ಕಸರ ಸೋಲಿಸೊ । ವಾಯುಸುತನಿಗೆ ನೀ ಪ್ರಿಯನಾಗೆನ್ನುತಾ ॥ ೧ ॥ ಧೀರನು ನೀನಾಗು ಅತಿ ದಯಾಂಬುಧಿಯಾಗು । ಆ ರುಗ್ಮಿಣಿಗೆ ನೀನರಸನಾಗು ॥ ಮಾರನ ಪಿತನಾಗು ಮಧುಸೂದನನಾಗು । ದ್ವಾರಾವತಿಗೆ ನೀ ಧೊರೆಯಾಗೆನ್ನುತಾ ॥ ೨ ॥ ಆನಂದರೂಪಾಗು ಅಚ್ಯುತ ನೀನಾಗು । ದಾನವಾಂತಕನಾಗು ದೇವ ನೀನಾಗು ॥ ಶ್ರೀನಿವಾಸನಾಗು ಶ್ರೀಧರ ನೀನಾಗು । ಜ್ಞಾನಿ ಪುರಂದರವಿಠಲನಾಗೆನ್ನುತಾ ॥ ೩ ॥ ಶ್ರೀಃ ॥

## ೮೮. ರಾಗ ಶಂಕರಾಭರಣ, ಅಟತಾಳ.

ಹಣ್ಣು ಕೊಂಬರು ಬನ್ನಿ । ಹರಿದಾಸರು । ಚಿನ್ನ ಬಾಲಕೃಷ್ಣನೆಂಬೊ ಹೆಸರಿನ ಹಣ್ಣು ॥ ಪಲ್ಲ ॥ ಅಜನ ಪಡೆದ ಹಣ್ಣು ಗಜವ ಸಲಹಿದ ಹಣ್ಣು । ತ್ರಿಜಗಾದಿ ಗುರುವಿಗೆ ತೋರ್ದ ಹಣ್ಣು ॥ ತ್ರಿಜಗವಂದಿತ ಪಾದ ಎಂಬೊ ಮಾವಿನ ಹಣ್ಣು । ಸುಜನಗಂಧಿಯರಾ ನೀವು ಕೊಳಬನ್ನಿರಮ್ಮಯ್ಯ ॥ ೧ ॥ ಮುದ್ದು ಸುರಿವ ಹಣ್ಣು ಕ್ಷುದ್ರ ಹರಿಸುವ ಹಣ್ಣು । ಕದ್ದು ಬೆಣ್ಣೆಯ ಮೆದ್ದ ಕಳ್ಳ ಹಣ್ಣು ॥ ಒದ್ದು ಮಾವನ ಕೊಂದು ಮಾತೆಯಪ್ಪಿದ ಹಣ್ಣು । ಮುದ್ದು ಕೃಷ್ಣನೆಂಬೊ ಹಣ್ಣು ಕೊಳಬನ್ನಿರಮ್ಮಯ್ಯ ॥ ॥ ೨ ॥ ಮುನ್ನೊಬ್ಬ ಜಾಮಿಳನ ಪಾಪ ಅಳಿದ ಹಣ್ಣು । ಕನ್ನೆಯರಭಿಮಾನ

ಕಾಯಿದ ಹಣ್ಣು ॥ ಪನ್ನಂಗಶಾಯಿ ಪಾಲ್ಗಡಲೊಡೆಯನೆಂಬೊ ಹಣ್ಣು । ಚೆನ್ನ ಕೃಷ್ಣನೆಂಬೊ ಹಣ್ಣು ಕೊಳಬನ್ನಿರಮ್ಮಯ್ಯ ॥ ३ ॥ ಎರಡೆಂಟು ಸಾವಿರ ಗೋಪೀರಾಳಿದ ಹಣ್ಣು । ಕರದರೆ ಕಂಭದಿಂದ ಓ ಎಂದ ಹಣ್ಣು ॥ ಮರುಗುವ ಧ್ರುವಗೆ ಉನ್ನತ ಮಾಡಿದ ಹಣ್ಣು । ಪುರಂದರವಿಠಲನೆಂಬೊ ಹಣ್ಣು ಕೊಳಬನ್ನಿರಮ್ಮಯ್ಯ ॥ ೪ ॥ ಶ್ರೀಃ ॥

೮೯. ರಾಗ ನಾದನಾಮಕ್ರಿಯೆ, ಏಕತಾಳ.

ಊರಿಗೆ ಬಂದರೆ ದಾಸಯ್ಯ । ನಮ್ಮ । ಕೇರಿಗೆ ಬಾ ಕಂಡ್ಯ ದಾಸಯ್ಯ ॥ ॥ ಪಲ್ಲ ॥ ಕೇರಿಗೆ ಬಂದರೆ ದಾಸಯ್ಯ । ಗೊಲ್ಲ । ಕೇರಿಗೆ ಬಾ ಕಂಡ್ಯ ದಾಸಯ್ಯ ॥ ಅನುಪಲ್ಲ ॥ ಕೊರಳೊಳು ವನಮಾಲೆ ಧರಿಸಿಹನೇ । ಕಿರು । ಬೆರಳೊಳು ಗಿರಿಯನು ನೆಗಹಿದನೇ ॥ ಇರುಳು ಹಗಲು ನಿನ್ನ ಕಾಣದೆ । ಇರಲಾರೆ । ಮರುಳು ಮಾಡುವಂಥ ದಾಸಯ್ಯ ॥ ೧ ॥ ಕಪ್ಪುವರ್ಣದ ದಾಸಯ್ಯ । ಕಂ । ದರ್ಪಪಿತನೆಂಬೊ ದಾಸಯ್ಯ ॥ ಅಪ್ಪಿಕೊಂಡು ನಮ್ಮ ಮನಸಿಗೆ । ಬಂದರೆ । ಅಪ್ಪಾಲು ಕೊಡುವೆನು ದಾಸಯ್ಯ ॥ ೨ ॥ ಮುಂದೇನು ದಾರಿ ದಾಸಯ್ಯ । ಚೆಲ್ವ । ಪೊಂಗೊಳಲೂದುವ ದಾಸಯ್ಯ ॥ ಹಾಂಗೆ ಹೋಗದಿರು ದಾಸಯ್ಯ । ಹೊ । ನ್ನಂಗುರ ಕೊಡುವೆನು ದಾಸಯ್ಯ ॥ ೩ ॥ ಬೊಮ್ಮನಾಮದ ದಾಸಯ್ಯ । ಅಪ್ಪ । ನಮ್ಮ ಸದುರಿಗೆ ಬಾ ಕಂಡ್ಯ ದಾಸಯ್ಯ ॥ ಗಮ್ಮನೆ ಬಂದರೆ ದಾಸಯ್ಯ । ಸರ । ಳಿಮ್ಮೆಯ ಕೊಡುವೆನು ದಾಸಯ್ಯ ॥ ೪ ॥ ಸಿಟ್ಟು ಮಾಡದಿರು ದಾಸಯ್ಯ । ಪುರಂದರ । ವಿಠ್ಠಲನೆಂಬ ದಾಸಯ್ಯ ॥ ರಟ್ಟು ಮಾಡದಿರು ದಾಸಯ್ಯ । ತಂ । ಭಿಟ್ಟನು ಕೊಡುವೆನು ದಾಸಯ್ಯ ॥ ೫ ॥ ಶ್ರೀಃ ॥

೯೦. ರಾಗ ತೋಡಿ, ಆದಿತಾಳ.

ಮನವೆನ್ನ ಮಾತು ಕೇಳದು । ಮಂದಜ್ಞಾನದೀ । ತನುವಿನಾಶಿಯ ಬಿಡಲೊಲ್ಲದು ॥ ಪಲ್ಲ ॥ ವನಜನಾಭನೆ ನಿನ್ನ ನಾಮದ ಸ್ಮರಣೆಯು । ನೆನೆಯದೆ ಕಂಡಕಂಡ ಕಡೆಗೆ ಎಳೆಯುತಲಿದೆ ॥ ಅನುಪಲ್ಲ ॥ ದೇಹ ಸಂ ಬಂಧಿಗರಾದರ್ಯೆವರು । ಮೋಹಪಾಶದಿ ಕಟ್ಟಿ ಎಳೆಯುವರ್‍ಪೈ ॥ ಕಾಯ

ಅನಿತ್ಯವೆಂಬುದು ಅರಿತರಿಯದೆ । ಮಾಯ ಪ್ರಪಂಚದಲಿ ಬದ್ಧವಾಗಿದೆ ॥ ೧ ॥ ಸಾಧು ಸಜ್ಜನರ ಸಂಗವ ಮಾಡಿ ಪರಗತಿ । ಸಾಧನವನು ಮಾಡಲೊಲ್ಲದು ॥ ಕ್ರೋಧಿ ಕುಹಕ ದುಷ್ಟರೊಡನಾಡಿ ಕಾಲನ । ಬಾಧೆಗೆ ಗುರಿಯಾಗುವಂತೆ ಮಾಡುತಲಿದೆ ॥ ೨ ॥ ಮದಗಜ ವೈರಿಯು ಮರೆತು ಮುಂದುಗಾಣದೆ । ಉದಧಿಯೊಳಗೆ ಬಿದ್ದಂತಾದೆನೊ ॥ ಹೃದಯಕಮಲದಲ್ಲಿ ನಿಂದು ರಕ್ಷಿಸೊ ಯೆನ್ನ । ಪದುಮಾಕ್ಷ ವರದ ಪುರಂದರವಿಠಲ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೯೧. ರಾಗ ಮುಖಾರಿ, ಅಟತಾಳ.

ಸಿಕ್ಕಿದನೆಲೆ ಜಾಣೆ ಶ್ರೀವೇಣುಗೋಪಾಲ । ಭಕ್ತವತ್ಸಲ ದೇವನು ॥ ಪಲ್ಲ ॥ ಮಕ್ಕಳ ಚಂಡಿಕೆ ಮರದ ಕೊನೆಗೆ ಕಟ್ಟಿ । ಘಕ್ಕನೆ ಚಪ್ಪಳೆಯಿಕ್ಕಿ ನಲಿವನಮ್ಮ ॥ ಅನುಪಲ್ಲ ॥ ಹೆಣ್ಣುಮಕ್ಕಳು ಬಚ್ಚಲೊಳಗೆಣ್ಣೆ ಹಚ್ಚಿಕೊಂಡು । ಬಣ್ಣ ವಸ್ತ್ರವ ಬಿಚ್ಚಿ ಬತ್ತಲಿರೇ ॥ ಕಣ್ಣಿಗೆ ಬಿಸಿನೀರು ಚೆಲ್ಲಿ ಸೀರೆಯ ನೊಯ್ದು । ಉನ್ನತವಾದ ವೃಕ್ಷವನೇರಿ ಇಹನಮ್ಮ ॥ ೧ ॥ ಪಟ್ಟೆಮಂಚದ ಮೇಲೆ ಪತಿಯಂತೆ ಕುಳ್ಳಿರೆ । ಎಷ್ಟು ಸ್ವತಂತ್ರ ಇವಗೆ ಗೋಪಿ ॥ ಉಟ್ಟ ಸೀರೆಯನೊಯ್ದು ಬಟ್ಟಕುಚವ ಪಿಡಿವ । ಎಷ್ಟೆಂತ ಹೇಳಲೆ ಭ್ರಷ್ಟ ಮಾಡಿದ ನಮ್ಮ ॥ ೨ ॥ ಪಡಗರದಿ ಷೋಡಶ ಸಹಸ್ರ ಸ್ತ್ರೀಯರ । ಒಡಗೂಡಿ ಕೊಳಲನೂದುತ ಬಂದು । ಕಡೆವ ಗೋಪಿಯ ಶೆರಗಾ ಜೆಡೆ ಪಿಡಿದೆಳೆವ ಎ । ನ್ನೊಡೆಯ ಗುರು ಪುರಂದರವಿಠಲರಾಯನೆ ॥ ೩ ॥

೯೨. ರಾಗ ನವರೋಜು, ಆದಿತಾಳ.

ಡೊಂಕು ಬಾಲದ ನಾಯಕರೆ ನೀವೇನೇನೂಟ ಮಾಡಿದಿರಿ ॥ ಪಲ್ಲ ॥ ಕಣಕ ಕುಟ್ಟೊ ಅಲ್ಲಿಗೆ ಹೋಗಿ । ಹಣಿಕಿ ಇಣಿಕಿ ನೋಡುವಿರಿ ॥ ಕಣಕ ಕುಟ್ಟೊ ಒನಿಕೆಲಿ ಬಡದರೆ । ಕೈಂ ಕುಯಿ ರಾಗವ ಮಾಡುವಿರಿ ॥ ೧ ॥ ಹುಗ್ಗಿ ಮಾಡೋ ಅಲ್ಲಿಗೆ ಹೋಗಿ । ತಗ್ಗಿ ಬಗ್ಗಿ ನೋಡುವಿರಿ ॥ ಹುಗ್ಗಿ ಮಾಡೊ ಸೌಟಿಲಿ ಬಡೆದರೆ । ಕೈಂ ಕುಯಿ ರಾಗವ ಪಾಡು

ವಿರಿ ॥ ೨ ॥ ಹಿರೇ ಬೀದಿಯಲಿ ಓಡುವಿರಿ । ಕರೇ ಬೂದಿಯಲಿ ಹೊರ ಳುವಿರಿ ॥ ಪುರಂದರವಿಠಲರಾಯ ಈ ಪರಿ । ಪರಿ ಆಟದಿ ಸದಾ ಚರಿ ಸುವಿರಿ ॥ ೩ ॥ ಶ್ರೀಃ ॥

## ೯೩. ರಾಗ ಸೌರಾಷ್ಟ್ರ ಅಟತಾಳ.

ಎರವಿನ ಸಿರಿಗೆ ಬಿಮ್ಮನೆ ಬೆರೆತರೆ ನೀರ । ಕಡದರುಂಟೆ ಬೆಣ್ಣೆ ಜೀವವೆ ॥ ಉರಗನ ಹೆಡೆಯು ನೆಳಲ ಸೇರಿದ ಕಪ್ಪೆ । ಸ್ಥಿರಕಾಲ ಬಾಳ್ವದೆ ಜೀವವೆ ॥ ॥ ಪಲ್ಲ ॥ ಸತಿಸುತರೆಂದು ನೆಚ್ಚಲು ಬೇಡ ಮನದೊಳು । ಹಿತವರೊಬ್ಬರ ಕಾಣೆ ಜೀವವೆ ॥ ವೃಥಾ ನೀನು ಕೆಡಬೇಡ ಮರಣವು ತಪ್ಪದು । ದಶಕಂಠಗಾದರು ಜೀವವೆ ॥ ೧ ॥ ಆಸೆ ಮಾಡಲು ಬೇಡ ಭಾಷೆ ತಪ್ಪಲು ಬೇಡಾನ್ಯ । ಸ್ತ್ರೀ ಸಂಗವು ಬೇಡ ಜೀವವೆ ॥ ಏಸೇಸು ಜನ್ಮಾಂತರ ಕಳೆದುಳಿದರು । ಈ ಸಾವು ತಪ್ಪದು ಜೀವವೆ ॥ ೨ ॥ ಆನೆ ಕುದುರೆ ಮಂದಿ ಕಾನೆ ಭಂಡಾರವು । ಯೇನು ಪಡೆದರಿಲ್ಲ ಜೀವವೆ ॥ ಮಾಸ ಸಹ ಸರ್ವ ಹರಿಗೆ ಅರ್ಪಣಮಾಡಿ । ಪೂನೀತನಾಗಿರು ಜೀವವೆ ॥ ೩ ॥ ಕೆರೆಯು ಕಟ್ಟಿಸು ಮತ್ತೆ ಪೂದೋಟ ಹಾಕಿಸು । ಸೆರೆಯು ಬಿಡಿಸು ಪುಣ್ಯ ಜೀವವೆ ॥ ಕರೆಯದೆ ಮನೆಗೆ ಬಂದವರಿಗನ್ನವ ನೀಡು । ಪರಲೋಕ ಸಾಧನ ಜೀವವೆ ॥ ೪ ॥ ಸತ್ಯವಂತರ ಸಂಗದೊಳಗೆ ಚರಿಸೆ ಮೃತ್ಯು । ಅತ್ತತ್ತಲಿರುವಳು ಜೀವವೆ ॥ ಸತ್ಯವಂತ ಗುರು ಪುರಂದರವಿಠಲನ್ನೆ । ಸತ್ತು ಹುಟ್ಟುವದಿಲ್ಲ ಜೀವವೆ ॥ ೫ ॥ ಶ್ರೀಃ ॥

## ೯೪. ರಾಗ ಭೈರವಿ, ತ್ರಿಪುಟತಾಳ.

ಕಂಡೆ ಕನಸಿನಲ್ಲಿ । ಕಂಡೆ ನಾ ಕನಸಿನಲ್ಲಿ ॥ ಕನಕ ರತ್ನದ ಮಣಿಯು ನಂದನ ಕಂದ ಮುಕುಂದನ ಚರಣವ ॥ ಪಲ್ಲ ॥ ಅಂದುಗೆ ಕಿರುಗೆಜ್ಜೆ ಘಲಿರೆಂದು ತವಕದಿ । ಬಂದು ಕಾಳಿಂಗನ ಹೆಡೆಯನೇರಿ ॥ ಧಿಂ ಧಿಮಿ ಧಿಮಿಕೆಂದು ತಾಳಗತ್ತುಗಳಿಂದಾ । ನಂದದಿ ಕುಣಿವ ಮುಕುಂದನ ಚರಣವ ॥ ೧ ॥ ಉಟ್ಟ ಪೀತಾಂಬರ ಉಡಿಯು ಕಾಂಚಿಯು ದಾಮ । ಇಟ್ಟ ಮುತ್ತಿನ ಹಾರ ಕೌಸ್ತುಭದ ॥ ಕಟ್ಟಿದ ವೈಜಯಂತಿ ತುಲಸಿ

ವನಮಾಲೆ । ಇಟ್ಟ ದ್ವಾದಶನಾಮ ನಿಗಮಗೋಚರನ ॥ ೨ ॥ ಬಣ್ಣದ ತುಟಿ ಭಾವರಚನೆಯ ಸುಲಿಪಲ್ಲು । ಸಣ್ಣ ನಗೆಯ ನುಡಿಯ ಸವಿಮಾತಿನ ॥ ಪುಣ್ಯಚರಿತ್ರನ ಪೊಳೆವ ಕಿರೀಟವು । ಕಣ್ಣು ಮನದಣಿಯದು ಕಂಸಾರಿ ಕೃಷ್ಣನ ॥ ೩ ॥ ಕಿರುಬೆರಳಿನ ಮುದ್ರೆ ಉಂಗುರದ ಮುಂಗೈಯ । ಕರದಲ್ಲಿ ಕಂಕಣ ನಳಿತೋಳಿನ ॥ ವರಚತುರ್ಭುಜ ಶಂಖ ಅರಿ ಪಿಡಿದು ಮೆರವನಾ । ನಿರುತದಿಂದೊಪ್ಪುವ ಕಾರುಣ್ಯಮೂರುತಿಯ ॥ ॥ ೪ ॥ ಮಂಗಳ ವರ ತುಂಗಭದ್ರದಿ ಮೆರೆವನ । ಅಂಗಜಪಿತನಾದ ಲಕ್ಷ್ಮೀಪತಿಯ ॥ ಶೃಂಗಾರವಾದ ಶ್ರೀಪುರಂದರವಿಠಲನ । ಕಂಗಳಿಂದ ಕಂಡು ಧನ್ಯನಾದೆ ॥ ೫ ॥ ಶ್ರೀಃ ॥

## ೯೫. ರಾಗ ತೋಡಿ, ಅಟತಾಳ.

ಸೈಸಲಾರೆನೆ ಗೋಪಿ ನಿನ್ನ ಮಗನ ಲೂಟಿ। ಯೇನೆಂದು ಪೇಳಲಮ್ಮ॥ ವಾಸುದೇವನು ಬಂದು ಮೋಸದಿಂದಲಿ ಎನ್ನ । ವಾಸವ ಸೆಳಕೊಂಡು ಓಡಿಹೋದನಮ್ಮ ॥ ಪಲ್ಲ ॥ ದೇವರ ಪೆಟ್ಟಿಗೆ ತೆಗೆದು ಸಾಲಿಗ್ರಾಮ । ಸಾವಿರ ನುಂಗುವನೆ ॥ ಭಾವಜನಯ್ಯ ಇದೇನಂದರೆ ನಿಮ್ಮ। ಕಾವ ದೇವರು ನಾನು ಕೇಳಿಕೊ ಎಂಬನೆ ॥ ೧ ॥ ಅಗ್ರೋದಕ ತಂದು ಜಗಲಿ ಮೇಲಿಟ್ಟರೆ । ವೆಗ್ಗಳದಲಿ ಕುಡಿವ ॥ ವಿಗ್ರಹಗಳಿಗೆ ಮಾಸಲು ಎಂದರೆ ನಿಮ್ಮ। ವಿಗ್ರಹಗಳಿಗೆಲ್ಲ ಅಪ್ಪ ನಾನೆಂಬುವ ॥ ೨ ॥ ಅಟ್ಟ ಅಡಿಗೆಯೆಲ್ಲ ಉಚ್ಛಿಷ್ಟವ ಮಾಡಿ । ಅಷ್ಟು ತಾ ಬಳದುಂಬನೆ ॥ ಕೃಷ್ಣ ದೇವರ ನೈವೇದ್ಯವೆಂದರೆ ನಿಮ್ಮ। ಇಷ್ಟದೇವರು ತೃಪ್ತನಾದನೆಂತೆಂಬುವಾ ॥ ೩ ॥ ಋತುವಾದ ಅಬಲೇರು ಪತಿಯೆಡೆ ಪೋಪಾಗ । ಪಥದೊಳಡಗಿರುವಾ ॥ ಮತಿಗೆಟ್ಟ ಹೆಣ್ಣೆ ಸುಂಕವ ಕೊಡು ಎನುತಲಿ। ಅತಿ ಪ್ರೇಮದಲಿ ಮಾರನ ಸೂರೆಗೊಂಬುವಾ ॥ ೪ ॥ ಅಚ್ಚ ಪಾಲು ಮೊಸರು ನವನೀತ ಮಜ್ಜಿಗೆ । ರಚ್ಚು ಮಾಡಿ ಕುಡಿವಾ ॥ ಸ್ವಚ್ಛ ಶ್ರೀಪುರಂದರವಿಠಲರಾಯನ । ಇಚ್ಛೆ ಬಂದಾಗ ನಿಮ್ಮನೆಗೆ ಕರದುಕೊಳ್ಳಿ ॥ ೫ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

### ೯೬. ರಾಗ ತೋಡಿ, ಆದಿತಾಳ.

ನಿತ್ಯವಲ್ಲ ನಿತ್ಯವಲ್ಲ ಅನಿತ್ಯ ದೇಹವಿದಣ್ಣ । ಮತ್ತೆ ಮುರಾರಿ ಕೃಷ್ಣನ ನೆನೆಯಲು ಮುಕ್ತಿಗೆ ಸಾಧನವಣ್ಣ ॥ ಪಲ್ಲ ॥ ಮಾನಿನಿಯರ ಕುಚಕೆ ಮರುಳಾಗದಿರು ಮಾಂಸದ ಗಂಟುಗಳಲ್ಲಿ । ನಾನಾ ಪರಿಯಲಿ ಮೋಹಗೊಳ್ಳದಿರು ಹೀನ ಮೂತ್ರದ ಕುಣಿಯಲ್ಲಿ ॥ ಏನು ಹೇಳಿದರು ನಂಬದಿದ್ದರೆ ಬಹಳ ಕಷ್ಟ ಕಾಣಲ್ಲಿ । ಜಾನಕಿರಮಣನ ಧ್ಯಾನವ ಮಾಡಲು ಜಾಣನಾಗುವಿ ಇಲ್ಲಿ ಪ್ರಾಣೀ ॥ ೧ ॥ ತಂದೆತಾಯಿಗಳು ಅಣ್ಣತಮ್ಮಂದಿರು ಬಂಧುಬಳಗಗಳೆಲ್ಲ । ಪೊಂದಿ ಪೊರೆದ ಆ ಮಡದಿ ಮಕ್ಕಳು ತಿಂದು ಹೋಗುವರೆಲ್ಲ ॥ ಮಂದಭಾಗ್ಯ ನೀನಾಗಲು ನಿನ್ನಾ ಮುಖವ ನೋಡುವರಲ್ಲ । ಬಂದೆಮದೂತರು ಸೆಳೆದೊಯ್ವಾಗ ನಿನ್ ಹಿಂದೆ ಬಾಹೋರ್ಯಾರಿಲ್ಲ ಪ್ರಾಣಿ ॥ ೨ ॥ ಕತ್ತಲೆ ಬೆಳದಿಂಗಳು ಸಂಸಾರ ಕಟ್ಟೊ ಧರ್ಮದ ಮೊಟ್ಟೆ । ಹೊತ್ತನರಿಯದ ಹರಿದಾಸರ ಕೂಡಿ ಹೋಗೋ ಶ್ರೀರಾಜಬಟ್ಟೆ ॥ ಚಿತ್ತ ಶುದ್ಧದಲಿ ನಡಕೊಳ್ಳದಿದ್ದರೆ ವ್ಯರ್ಥವಾಗಿ ನೀ ಕೆಟ್ಟೆ । ಚಿತ್ತಜನಯ್ಯ ಶ್ರೀಪುರಂದರವಿಠಲನ ಹೊಂದೊ ಬೇಗದಿ ಘಟ್ಟೆ ॥ ೩ ॥ ಶ್ರೀಃ ॥

### ೯೭. ರಾಗ ಕೇದಾರಗೌಳ, ಅಟತಾಳ.

ತಿಂಗಿ ನೋಡೆ ನಮ್ಮಂಗಳದೊಳು ಪಾಂಡು । ರಂಗ ಮೆಲ್ಲಡಿ ಇಟ್ಟು ಪೋದನಮ್ಮಾ ॥ ಪಲ್ಲ ॥ ಗಂಗೆ ಜನಿಸಿ ಮೂಲೋಕಕ್ಕೆ ಮುಕುತಿಯು ತಾ । ರಂಗವಲಿವ ಪಾದಾ ॥ ಮಂಗಳ ಸಾಸಿರದಳದ ಸರ್ವೋತ್ತಮು । ರಂಗವಲ್ಲಿಯನಿಕ್ಕಿದಂತೆ ಶೋಭಿಸುತಿದೆ ॥ ೧ ॥ ಸಿರಿಯಜಭವರುಗಳರಸಿ ಕಾಣರು । ಸಿರಿಚರಣ ಪೂರಿತ ಬೆಳಗುತಿದೆ ॥ ವರ ವಜ್ರಾಂಕುಶ ಧ್ವಜ ಊರ್ಧ್ವರೇಖೆಯ ನೋಡಿ । ಧರಣಿಗಾಭರಣವಿಟ್ಟಂತೆ ಶೋಭಿಸುತಿದೆ ॥ ॥ ೨ ॥ ಹಿಂದಿನಾನಂತ ಜನ್ಮದ ಪಾಪಕೆ ಕೇಡು । ಮುಂದಣಾನಂತ ಸುಕೃತಕೆ ಜೋಡು ॥ ತಂದೆ ಶ್ರೀಪುರಂದರವಿಠಲರಾಯ ಸುಳಿದು । ಹಿಂದೆ ಮುಂದೆ ಕೋಟಿ ಕುಲವನುದ್ಧರಿಸಿದ ॥ ೩ ॥ ಶ್ರೀಃ ॥

೯೮. ರಾಗ ಧನಾಸಿ, ಆದಿತಾಳ.

ಕದವ ಮುಚ್ಚಿದಳದಕೊ । ಗಯ್ಯಾಳಿ ಮೂಳಿ। ಕದವ ಮುಚ್ಚಿದ ಳದಕೋ ॥ ಪಲ್ಲ ॥ ಕದವ ಮುಚ್ಚಿದಳದಕೊ ಚಿಲುಕ ಅಲ್ಲಾಡುತಿದೆ ॥ ಒಳಗಿದ್ದ ಪಾಪವು ಹೊರಗೆ ಹೋದೀತೆಂದು ॥ ಅನುಪಲ್ಲ ॥ ಭಾರತ ರಾಮಾಯಣ ಪಂಚರಾತ್ರಾಗಮ ॥ ಸಾರತತ್ವದ ಬಿಂದು ಒಳಗೆ ಬಿದ್ದೀ ತೆಂದು ॥ ೧ ॥ ಅಂದುಗೆ ಕಿರುಗೆಜ್ಜೆ ಮುಂಗಾಲು ಫಣಿವಟ್ಟು ॥ ಧಿಂ ಧಿಮಿ ಧಿಮಿಕೆಂದು ಕುಣಿವ ದಾಸರ ಕಂಡು ॥ ೨ ॥ ನಂದನ ಕಂದ ಗೋವಿಂದ ಮುಕುಂದನಾ ॥ ಅಂದವಾದ ಧ್ವನಿ ಕೇಳುತಲಿದೆ ಎಂದು ॥ ೩ ॥ ಸಿರಿ ಹರಿ ಶರಣರ ಪಾದಕಮಲದ ॥ ಪರಮಪಾವನ ಪಾದರಜವು ಬಿದ್ದೀ ತೆಂದು ॥ ೪ ॥ ಮಂಗಳ ಮೂರುತಿ ಪುರಂದರವಿಠಲನ್ನ ॥ ತುಂಗ ವಿಕ್ರ ಮನ ಪಾದದಂಗುಲಿ ಸೋಂಕೀತೆಂದು ॥ ೫ ॥ ಶ್ರೀಃ ॥

೯೯. ರಾಗ ಪಂತುರಾವಳಿ, ಏಕತಾಳ.

ರಾಮನಾಮ ಪಾಯಸಕ್ಕೆ ಕೃಷ್ಣನಾಮ ಸಕ್ಕರೆ । ವಿಟ್ಠಲನಾಮ ತುಪ್ಪವ ಕಲಸಿ ಬಾಯಿ ಚಪ್ಪರಿಸಿರೋ ॥ ಪಲ್ಲ ॥ ಒಮ್ಮಾನ ಗೋಧಿಯ ತಂದು ವೈರಾಗ್ಯ ಕಲ್ಲಿಲಿ ಬೀಸಿ ॥ ಸುಮ್ಮಾನೆ ಸಜ್ಜಿಗೆಯ ತೆಗೆದು ಸಣ್ಣ ಶಾವಿಗೆಯ ಹೊಸೆದು ॥ ೧ ॥ ಹೃದಯವೆಂಬೊ ಮಡಿಕೆಯಲ್ಲಿ ಭಾವ ಎಂಬೊ ಎಸರನ್ನಿಟ್ಟು ॥ ಬುದ್ಧಿಯಿಂದ ಪಾಕಮಾಡಿ ಹರಿವಾಣಕೆ ಬಡಿಸಿ ಕೊಂಡು ॥ ೨ ॥ ಆನಂದ ಆನಂದವೆಂಬೊ ತೇಗು ಬಂದಾಗ ಎರಡು ॥ ಆನಂದ ಮೂರುತಿ ನಮ್ಮ ಪುರಂದರವಿಠಲನ ನೆನೆಯಿರೋ ॥ ೩ ॥

೧೦೦. ರಾಗ ಪೀಲು, ಅಟತಾಳ.

ಅಪರಾಧಿ ನಾನಲ್ಲ ಅಪರಾಧವೆನಗಿಲ್ಲ । ಕಪಟನಾಟಕ ಸೂತ್ರ ಧಾರಿ ನೀನೆ ॥ ಪಲ್ಲ ॥ ನೀನೆ ಆಡಿಸದಿರಲು ಜಡ ಒನಿಕೆಯ ಬೊಂಬೆ। ಏನು ಮಾಡಲು ಬಲ್ಲದು ತಾನೆ ಬೇರೆ ॥ ನೀನಿಟ್ಟ ಸೂತ್ರದಿಂ ಚಲಿ ಪವು ಕೈಕಾಲುಗಳು । ನೀನೆ ಮುಗ್ಗಿಸಲು ಮುಗ್ಗುವ ದೇಹದವನು ॥

॥ ೧ ॥ ಒಂದೆಂಟು ಬಾಗಿಲ ಪಟ್ಟಣಕ್ಕೆ ತನ್ನ। ದೆಂದು ಇಪ್ಪತ್ತಾರು ಮನೆಯಾಳ್ಗಳಾ ॥ ತಂದು ಕಾವಲ ನಿಲಿಸಿ ಎನ್ನ ನಿ ಒಳಗಿಟ್ಟು । ಮುಂದೆ ಭವದಲಿ ಭವಣಿಪುದನ್ಯಾಯು ॥ ೨ ॥ ಯಂತ್ರವಾಹಕ ನೀನೆ ಒಳಗಿದ್ದು ಎನ್ನ ಸ್ವ। ತಂತ್ರನೆಂದೆನಿಸಿ ಕೊಲಿಸುವರೆ ಹೇಳೊ ॥ ಕಂತು ಪಿತ ಲಕ್ಷ್ಮೀಶ ಎಂತಾದಡಂತಹುದಾ । ನಂತ ಮೂರುತಿ ನಮ್ಮ ಪುರಂದರವಿಠಲ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೦೧. ರಾಗ ಕೇದಾರಗೌಳ, ಅಟತಾಳ.

ನಿನ್ನ ನಾಮವೆ ಎನಗೆ ಅಮೃತಾನ್ನವು । ಇನ್ನು ಹಸಿದಿರಲೇಕೆ ಎನಗೆ ನೀ ಒಲಿದಿರಲು ॥ ಪಲ್ಲ ॥ ಓಂಕಾರವೆಂಬ ನಿಮ್ಮ ನಾಮ ಉಪ್ಪಿನಕಾಯಿ । ಶಂಖಪಾಣಿಯು ನಾಮ ಶಾಖಾದಿ ಸೂಪಾ ॥ ಸಂಕರುಷಣ ಎಂಬ ನಾಮ ದಿವ್ಯ ಶಾಲ್ಯಾನ್ನವೂ । ಪಂಕಜಾಕ್ಷ ನಿನ್ನ ನಾಮ ಪಳದ್ಯ ಸಾರು ॥ ೧ ॥ ಕೇಶವನೆಂಬ ನಾಮ ಕರಿದ ಹೂರಣ ಕಡುಬು । ವಾಸುದೇವನ ನಾಮ ಒಡೆ ಶ್ಯಾವಿಗೆ ॥ ಸಾಸಿರವೆಂಬ ನಾಮ ಶ್ಯಾವಿಗ ಪರಮಾನ್ನ । ದೋಷದೂರನ ನಾಮ ಸೂಸಲ ಕಡುಬು ॥ ೨ ॥ ನಾರಾಯಣ ನಿಮ್ಮ ನಾಮ ನೊರೆಪಾಲು ಸಕ್ಕರೆ । ಶ್ರೀರಾಮ ನಾಮ ಸರವಳಿಗೆ ಸಜ್ಜಿಗೆ ॥ ಕಾರುಣ್ಯನಿಧಿ ನಾಮ ಕರಿದ ಹಪ್ಪಳ ಶಂಡಿಗೆ । ನಾರಾಯಣನ ನಾಮ ಪರಿಪರಿಯ ಪರಮಾನ್ನ ॥ ೩ ॥ ಯದುಪತಿ ಎಂಬ ನಾಮವೂ ಎಣ್ಣೋಳಿಗೆ ರಾಶಿ। ಮಧುಸೂದನನೆಂಬ ನಾಮ ಮಂಡಿಗೆಯು ॥ ಚದುರ ಗೋವಳ ನಾಮ ಚೆಲುವ ಬಿಸೂರಿಗೆ। ಪದ್ಮನಾಭ ನಿನ್ನ ನಾಮ ಪರಿಪರಿಯ ಭಕ್ಷ್ಯ ॥ ೪ ॥ ದೇವಕಿಸುತನಾಮ ದಧ್ಯನ್ನದ ಮುದ್ದೆ । ಗೋವಿಂದನ ನಾಮ ಗುಳ್ಳೋರಿಗೆ ॥ ಮಾವಮರ್ಧನ ನಾಮ ಕಲಸು ಮೋಲೋಗರ। ರಾವಣಾರಿಯ ನಾಮ ಇಡ್ಲಿ ಸುಖಿನುಂಡೆ ॥ ೫ ॥ ಗರುಡವಾಹನ ನಾಮ ಘೃತ ಪಯೋದಧಿ ತಕ್ರ । ಪರಮ ಪುರುಷನ ನಾಮವ ಪನ್ನೀರು ಪಾನ ॥ ವರದ ನಿನ್ನ ನಾಮ ಕರ್ಪೂರದ ವೀಳ್ಯ । ಶರಧಿ

ಯನ ನಾಮ ಶಯನ ಪರ್ಯಂಕಾ ॥ ೬ ॥ ಈ ಪರಿಲಿ ನಾಮಾವಳಿಯನು ನೆರಿಸವಿದುಂಬಿ। ಆಪತ್ತು ಬಿಡಿಸೆನ್ನ ಕ್ಷುಧೆಯ ನೂಕಿ॥ ಗೋಪಾಲ ಉರಗಾದ್ರಿ ಪುರಂದರವಿಠಲನೇ। ಶ್ರೀಪಾದ ನಂಬಿ ಅಪವರ್ಗವ ಸೇರುವೆ ॥ ೭ ॥

೧೦೨. ರಾಗ ಸಾವೇರಿ, ಅಟತಾಳ.

ಮಾಧವ ಮಧುಸೂದನ ಯಾದವಕುಲರನ್ನ । ಬಾರೆಂದು ಕರದಳ್ಳಿಶೋದೆ ಮುದ್ದಿಲಿ ಮಗನಾ ॥ ಪಲ್ಲ ॥ ಸಂಗಡಿಗರನೆಲ್ಲ ಬಿಟ್ಟು ಬಾರಯ್ಯ ಚೆಲುವ । ಮುಂಗಯ್ಯ ವಾಕು ಬೆರಳ್ಹೊನ್ನುಂಗುರ ॥ ಝುಂಗಿಪ ಉಡಿಗೆಜ್ಜೆ ಉಡಿದಾರವ ಕಂಡು । ಅಂಗನೆಯರು ನಿನ್ನ ವೈವರೋ ॥ ನಿನ್ನಂಘ್ರಿಮೇಲೆನ್ನ ನೊಸಲನಿಡುವೆ ಕೃಷ್ಣ। ಕಂಗಳ ಸಿರಿಯೆ ಬಾರೊ ಮಗನೆ ॥ ೧ ॥ ಬಾಲಕರೊಡನಾಟ ಸಾಕು ಬಾರಯ್ಯ। ನೀಲಾಂಗ ನಿನ್ನ ಮುತ್ತಿನರಳೆಲೆ ॥ ಕೀಲು ಮಾಗಾಯಿ ಹುಲಿಗುರು ಕಂಡು । ಸೋಲ್ವಾರೊ ನಿನಗೆ ಸೊಬಗಿಯರು ॥ ಶ್ರೀಲೋಲ ನೀನಾಳಿ ಕಂಸಾಸುರನ ತುಂಬಿದೊ। ಡ್ಡೋಲಗದೊಳು ರಕ್ಕಸರು ಪಂಥವಾಡಿ ॥ ವೀಳ್ಯವ ಪಿಡಿದು ಕೊಲುವೇನೆಂದು ನಿನ್ನ। ಕಾಲಿಗೆ ಎರಗುವೆ ಬಾರೋ ಮಗನೆ ॥ ೨ ॥ ಬೊಮ್ಮದ ಮರಿಯೆ ವಿಶ್ವವನೆಲ್ಲ ಹೃದಯದೊ। ಳೊಮ್ಮೆ ತೋರುವೆನೆಂದು ಕಂಡು ನಾ ಬಲ್ಲೆ॥ ಎನ್ನ ಮನಕೆ ಆಹ್ಲಾದನು ಉಪಾಯ । ದಿಂದ ಭಾಗವತರ ಪಾಲಿಸುತಿಪ್ಪ ॥ ಅಗಮ್ಯಗೋಚರ ಶ್ರೀಪುರಂದರವಿಠಲ। ತೊರೆದುಮ್ಮಿಯ ಕೊಡುವೆ ಬಾರೆಲೊ ಮಗನೆ ॥ ೩ ॥ ಶ್ರೀಃ ॥

೧೦೩. ರಾಗ ಆನಂದಭೈರವಿ, ಅಟತಾಳ.

ಗೋಕುಲದೊಳಗಿರಲಾರೆವಮ್ಮ ಗೋಪ್ಯಮ್ಮ ಕೇಳೆ। ಸಾಕು ಸಾಕು ನಮಗ್ಯಾಕೀ ವ್ರಜವು ಆ ಕೃಷ್ಣನ ಕಾಟದಿ ॥ ಪಲ್ಲ ॥ ಹಾಲು ಮೊಸರು ಕದ್ದರೆ ಕದಿಲಿ ಗೋಪ್ಯಮ್ಮ ಕೇಳೆ। ಮೇಲಿಟ್ಟ ಬೆಣ್ಣೆ ಮೆದ್ದರೆ ಮೆಲಲಿ ಗೋಪ್ಯಮ್ಮ ಕೇಳೀ । ರೇಳು ಭುವನದೊಳೋಲ್ಯಾಡುತ್ತಿರಲಿ ॥ ಆಲಯವನು ಪೊಕ್ಕು ಬಾಳ ಸಂಭ್ರಮದಿ । ಬಾಲೆಯರೆಲ್ಲರ ಬತ್ತಲೆ

ಮಾಡಿಸಿ ಶಾಲೆಗಳೆಲ್ಲವ। ಮೇಲಕ್ಕೆ ಹಾರಿಸಿ ಆಲಿಂಗಿಸಿಕೊಂಡು ಬರುತಾನಮ್ಮ॥ ೧ ॥ ಮನೆಗೆ ತಾನಾಗಿ ಬಂದರೆ ಬರಲಿ ಬಾಹೊ ವೇಳೆಯಲಿ। ಗೆಳೆಯರ ಕೂಡಿಕೊಂಡು ಇರಲಿ ಕರತಂದರೆ ತರಲಿ। ಅನುಬಂಧನಾಗಿ ಇದ್ದರೆ ಇರಲಿ ॥ ಅನುವು ನೋಡಿಕೊಂಡಾ ವೇಳೆಯಲಿ। ಉಣಬಿಟ್ಟಿಣಿಸಿ ಆಕಳ ಕರುಗಳ । ಮನೆಯವರೆಲ್ಲರ ತಾನೆ ಎಬ್ಬಿಸಿ ಮನೆಯಲ್ಲ ಸೂರಾಡಿದನಮ್ಮ॥ ೨ ॥ ಭಾರಿಭಾರಿಗೆ ವಲಿದ ಕಳ್ಳಾ ಯಶೋದೆ ಕೇಳೆ। ಊರ ಹೆಂಗಳೆರ ಕೂಡಿನ ಗೊಲ್ಲ ಗೋಪ್ಯಮ್ಮ ಕೇಳೆ। ಯಾರ ಮುಂದ್ಹೇಳುವದು ಈ ಸೊಲ್ಲಾ ॥ ವಾರಿಗೆಯ ಸಂಸಾರ ಮಾಡುವನು। ನಾರಿಯರೆಲ್ಲರ ನಂಬಿಸಿ ಕೆಡಿಪ ಏ । ಕಾರ ಮಾಡದ ಹಾಗೆ ನೀ ಕರಿಸಿ ಪುರಂದರವಿಠಲಗೆ ಬುದ್ಧಿ ಹೇಳಮ್ಮ॥ ೩ ॥ ಶ್ರೀಃ ॥

೧೦೪. ರಾಗ ಪೀಲು, ಆದಿತಾಳ.

ತೋರಮ್ಮಯ್ಯ ರಘುಕುಲ ರಾಮಚಂದ್ರಮನಾ ॥ ಪಲ್ಲ ॥ ಬಿಲ್ಲಹಬ್ಬಗಳಂತೆ ಅಲ್ಲಿ ಬೀದಿ ಶೃಂಗಾರವಂತೆ । ಮಲ್ಲರ ಕಳುಹಿದ ಮದ್ದಾನೆಯಂತೆ। ಮುದ್ದು ಕೃಷ್ಣ ತಾ ಯುದ್ಧಕ್ಕೆ ತೆರಳಿದ ॥ ೧ ॥ ಮಧುರಾಪುರಿಯಂತೆ ಅಲ್ಲಿ ಮಾವ ಕಂಸನಂತೆ। ಒದಗಿದ ಮದಗಜ ತುರಗ ಸಾಲಿನ। ಮದನಮೋಹನ ಕೃಷ್ಣ ಮಧುರೆಗೆ ತೆರಳಿದ ॥ ೨ ॥ ಅತ್ತೆಮಾವನ ಬಿಟ್ಟು ಬಂದೆವು ಹಿತ್ತಿಲ ಬಾಗಿಲಿಂದ । ಭಕ್ತವತ್ಸಲನಾ ಬಹು ನಂಬಿದ್ದೆವು, ಉತ್ಸಾಹ ಭಂಗವ ಮಾಡಿದನಮ್ಮ ॥ ೩ ॥ ಗಂಡುಮಕ್ಕಳ ಬಿಟ್ಟು ಬಂದೆವು ರಂಗನ ನೆರೆನಂಬಿ। ಮಂಗಳ ಮೂರುತಿ ಮದನ ಗೋಪಾಲ ಕೃಷ್ಣ। ಹಾಂಗೆ ಹೋದ ನಮ್ಮ ರಂಗನ ಕಾಣೆವು ॥ ೪ ॥ ಶೇಷಗಿರಿಯ ಮೇಲೆ ತಾ ಹರಿ ವಾಸವಾಗಿಹ ಕಾಣೆ। ಸಾಸಿರ ನಾಮದ ಒಡೆಯ ನೆನಸಿದಾ। ಶ್ರೀಶ ಪುರಂದರವಿಠಲನ ಕರದು ॥ ೫ ॥ ಶ್ರೀಃ ॥

೧೦೫. ರಾಗ ಆರಭಿ, ಆದಿತಾಳ.

ಆಡಿದನು ರಂಗ ಅದ್ಭುತದಿಂದಲಿ। ಕಾಳಿಂಗನ ಫಣೆಯಲಿ। ಪಲ್ಲ॥ ಪಾಡಿದವರಿಗೆ ಬೇಡಿದ ವರಗಳ ನೀಡುತಲಿ। ದಯಮಾಡುತಲಿ। ನಲಿದಾಡು

ತಲಿ । ಕುಣಿದಾಡಿದನು ರಂಗ ॥ ಅನುಪಲ್ಲ ॥ ಅಂಬುರುಹೋದ್ಭವ ಅಖಿಳ ಸುರರ ಕೂಡಿ । ಅಂಬರದಲಿ ನಿಂತು ಅವಸ್ತುತಿಸೇ । ರಂಭೆ ಊರ್ವಶಿ ರಮಣಿಯರೆಲ್ಲರು । ಚಂದದಿ ಭರತನಾಟ್ಯಗಳ ನಟಿಸೆ ॥ ಝಣಾತಕ । ತಕಧಿಮಿ । ತದಿಗಿಣಥೋ ಎಂದು । ಝಂಪೆತಾಳದಿ ತುಂಬುರನೊಲಿಸೆ । ಧಾಮ ಮಾಪಾ ಧ ಸಾರಿ ಎಂದು । ಧ್ವನಿಯಿಂದ ನಾರದ । ತುಂಬುರು ಗಾನವ ಮಾಡಲು । ನಂದಿಯು ಮದ್ದಳೆಯ ಚಂದದಿ ಹಾಕಲು ॥ ೧ ॥ ಫಣೆಯ ಮೆಟ್ಟಿ ಬಾಲವ ಕೈಯಲಿ ಪಿಡಿದು । ಫಳಫಳಿಸುತ ನಾಟ್ಯಗಳಾಡೆ । ಚಂದ್ರಮಂಡಲದಂತೆ ಪೋಲುವ ಮುಖ ದೊಳು ಚೆಲುವ ಕೇಶಗಳಾಡೆ ॥ ಕಾಲಲಂದುಗೆ ಗೆಜ್ಜೆ । ಘಲುಘಲೆನು ತಲಿ । ಉಡಿಗೆಜ್ಜೆ ಘಂಟೆಗಳಾಡೆ । ದುಷ್ಟ ಕಾಳಿಂಗನ । ಮೆಟ್ಟಿ ಭರ ದಿಂದ । ಪುಟ್ಟ ಪಾದವ ಇಟ್ಟು ಶ್ರೀ । ಕೃಷ್ಣನು ಮೆಟ್ಟಿ । ತಕಧಿಮಿ ತದಿ ಗಿಣಥೋ ಎಂದು ॥ ೨ ॥ ಸುರರು ಪುಷ್ಪದ ವೃಷ್ಟಿ ಕರೆಯಲು । ಸುದತಿಯ ರೆಲ್ಲರು ಪಾಡಲು । ನಾಗಕನ್ಯರು ನಾಥನ ಬೇಡಲು । ನಾನಾವಿಧದಿ ಸ್ತುತಿಮಾಡಲು ॥ ರಕ್ಕಸರೆಲ್ಲರು ಕಕ್ಕಸವನೆ ಕಂಡು । ದಿಕ್ಕು ದಿಕ್ಕುಗಳಿ ಗೋಡಲು । ಚಿಕ್ಕವನಿವನಲ್ಲ । ಪುರಂದರವಿಠಲ ॥ ವೆಂಕಟರಮಣನ ಬೇಗ ಯಶೋದೆ । ಬಿಂಕದೊಳೆತ್ತಿ ಮುದ್ದಾಡೆ ಶ್ರೀಕೃಷ್ಣನು ॥ ೩ ॥

। ಶ್ರೀಮಧ್ವೇಶಾರ್ಪಣಮಸ್ತು ॥

### ೧೧೬. ರಾಗ ಕಲ್ಯಾಣಿ; ಆದಿತಾಳ.

ಹೊಡಿ ನಗಾರಿ ಮೇಲೆ ಕಯ್ಯ । ಆನಂದಮದವೇರಿ ಮಯ್ಯ ॥ ಖಡ ಖಡ । ಹೊಡಿ ನಗಾರಿ ಮೇಲೆ ಕಯ್ಯ ॥ ಪಲ್ಲ ॥ ಮೃಡವಂದಿತ ಪಾದ । ದೃಢದಿ ಭಜಿಪರ ॥ ಬಿಡದೆ ಕಾಯ್ವ ಜಗ । ದೊಡೆಯ ಶ್ರೀಹರಿಯೆಂ ಥೊಡಿ ॥ ೧ ॥ ವೇದಗಮ್ಯ ಸಕ । ಲಾರ್ತಿ ನಿವಾರಕ ॥ ಮೋದವೀವ ಮಧು । ಸೂದನ ಧೊರೆಯೆಂಥೊಡಿ ॥ ೨ ॥ ಗಾನಲೋಲ ತನ್ನ । ಧ್ಯಾನಿ ಸುವರಿಗೆಲ್ಲ ॥ ಮಾನದಿಂದ ಕಾಯ್ವ । ಶ್ರೀನಿಧಿ ಪರಮನೆಂಥೊಡಿ ॥ ೩ ॥ ನಿಷ್ಠೆಯಿಂದಲಿ ಮನ । ಮುಟ್ಟಿ ಭಜಿಸುವರ ॥ ಕಷ್ಟವ ಕಳೆವ ಶ್ರೀ ।

ಕೃಷ್ಣನು ಪರನೆಂಥೊಡಿ ॥ ೪ ॥ ಈ ಪೃಥ್ವಿಯೊಳಗೆ । ವ್ಯಾಪಕನಾಗಿಪ್ಪ ॥ ಶ್ರೀಪತಿ ಪುರಂದರ । ವಿಠಲನು ಧಣಿಯೆಂಧೊಡಿ ॥ ೫ ॥ ಶ್ರೀಃ ॥

೧೦೭. ರಾಗ ರೇಗುಪ್ತಿ, ಅಟತಾಳ.

ಶ್ರೀತನ ಪಾಡುವೆ ಅನವರತಾ । ನಾ । ನಾತನ ಪಾಡುವೆ ॥ ಪಲ್ಲ ॥ ಪ್ರೀತಿಯಿಂದಲಿ ತನ್ನ ಭಕತರ ಸಲಹುವ ॥ ಅನುಪಲ್ಲ ॥ ಆವಾತನ ಕಥೆ ಕೇಳಿ ಪರೀಕ್ಷಿತ । ಪಾವನವಾದುದು ಜಗವರಿಯೆ ॥ ಆವಾಗ ಪ್ರಹ್ಲಾದ ಆರನು ಕರಿದನು । ಭಾವಶುದ್ಧಿಲಿ ಶುಕ ನಾರದ ಪೊಗಳುವರಾ ॥ ೧ ॥ ಶಿಲೆಯುನಬಲೆಯು ಮಾಡಿದ ಪಾದವಾರದು । ನಳಿನಸಂಭವನ ಪೆತ್ತವ ನಾರು ॥ ಕಲಿಯುಗ ಜನರಿಗೆ ಆರ ನಾಮವೆ ಗತಿ । ಇಳೆಯ ಭಾರವ ನಿಳುಹಿದರಾರೈ ॥ ೨ ॥ ದ್ರುಪದನ ಸುತೆಯುಭಿಮಾನ ರಕ್ಷಕನಾರೊ । ನೃಪಧರ್ಮರ ಪಾಲಕನಾರು ॥ ಕೃಪೆಯಿಂದ ವಿದುರನ ಮನೆಯಲ್ಲುಂಡ ವನಾರು । ಆಪತ್ಕಾಲದಿ ಗಜ ಸಲಹಿದರಾರೈ ॥ ೩ ॥ ಅತಿಶಯದಿಂದ ರ್ಜುನಗೆ ಸಾರಥಿಯಾಗಿ । ರಥವ ಪಿಡಿದು ನಡಿಸಿದರಾರು ॥ ಪೃಥಿವಿ ಯೆಲ್ಲವ ಬಲಿ ಆರಿಗೊಪ್ಪಿಸಿದನು । ಮತಿವಂತ ಧ್ರುವನ ರಕ್ಷಕನಾರಯ್ಯ ॥ ॥ ೪ ॥ ಸಾಗರನ ಮಗಳಿಗೆ ಪತಿಯಾರು । ಯೋಗಿಗಳಾರ ಭಜಿಪರಯ್ಯ ॥ ರಾಗರಹಿತ ಹನುಮಂತನೊಡೆಯನಾರು । ಭಾಗವತರ ಪ್ರಿಯ ಪುರಂದ ರವಿಠಲ ॥ ೫ ॥ ಶ್ರೀಃ ॥

೧೦೮. ರಾಗ ಧನಾಸಿ, ಆದಿತಾಳ.

ಹರಿನಾಮ ಕೀರ್ತನೆ ಅನುದಿನ ಮಾಳ್ಪಗೆ ನರಕಭಯಗಳುಂಟೆ ॥ ಪಲ್ಲ ॥ ಕೇಸರಿಗಂಜದ ಮೃಗವುಂಟೆ । ದಿ । ನೇಶಗಂಜದ ತಮವುಂಟೆ ॥ ವಾಸು ದೇವ ವೈಕುಂಠ ಜನಾರ್ದನ । ಕೇಶವ ಕೃಷ್ಣ ನೀನೆಂದುಚ್ಚರಿಸುವಾ ॥ ॥ ೧ ॥ ಕುಲಿಶಕೆ ಎದುರಪ್ಪ ಗಿರಿಯುಂಟೆ । ಬಲು । ಪ್ರಳಯ ಬಂದಾಗ ಜೀವಿಪರುಂಟೆ ॥ ಜಲಜನಾಭ ಗೋವಿಂದ ಜನಾರ್ದನ । ಕಲುಷ ಹರಣ ಕರಿರಾಜವರದನೆಂಬೊ ॥ ೨ ॥ ಗರುಡಗೆ ಅಂಜದ ಫಣಿ

ಯುಂಟೆ । ಧ । ಳ್ಳುರಿಯಲಿ ಬೇಯದ ತೃಣವುಂಟೆ ॥ ನರಹರಿ ನಾರಾಯಣ ಕೇಶವ ಕೃಷ್ಣ । ಪುರಂದರವಿಠಲ ನೀನೆಂದುಚ್ಚರಿಸುವ ॥ ೩ ॥

೧೦೯. ರಾಗ ರೇಗುಪ್ತಿ, ಝಂಪೆತಾಳ.

ಮತದೊಳಗೆ ಒಳ್ಳೆ ಮತ ಮಧ್ವಮತವೂ । ರಘು । ಪತಿ ಪೂಜಾ ವಿಧಾನಕ್ಕೆ ಪಾವನ ಮತವೂ । ಇದು ಪಾವನ್ನ ಮತವೂ ॥ ಪಲ್ಲ ॥ ನಾರಾಯಣನ ನಾಮಸ್ಮರಣೆ ನಂಬಿದಾ ಮತವು । ಇದು ನಂಬಿದಾ ಮತವು । ಪಾರಾಯಣಕೆ ಅನುಕೂಲ ಮತವೂ ॥ ತಾರತಮ್ಯದಿ ಉದ್ಧರಿಸಿ ಶ್ರುತಿಗಳನೊರೆದ । ಧಾರುಣಿಯ ಸುರರ ಸಂತೋಷದ ಮತವೂ ॥ ॥ ೧ ॥ ಅಕಳಂಕ ಶ್ರೀಹರಿಗೆ ವಜ್ರಾಂಕಿತ ಮತವು । ಇದು ಮುದ್ರಾಂಕಿತ ಮತವೂ । ಸಕಲ ದೇಶಕ್ಕೆ ಸನ್ಮತವಾದ ಮತವೂ ॥ ಅಕುಟಿಲ ಶುಕ ಸನಕಾದಿ ಮುನೀಂದ್ರರ । ನಿಖಿಳಕ್ರಿಯುಪದವೀವ ನಿರ್ಮಲ ಮತವೂ ॥ ॥ ೨ ॥ ಸರಸ ಸದ್ಗುಣ ಸತ್ಯ ಸಾತ್ವಿಕವೀಮತವು । ಇದು ಶುದ್ಧ ಸಾತ್ವಿಕ ಮತವು । ಗುರು ಶಿಷ್ಯರಿಗೆ ಅನುಕೂಲವಾದ ಮತವು ॥ ಪರ ಮತ ಖಂಡಿಸಿ ಪಂಡಿತರು ಪೇಳಿದ । ಪುರಂದರವಿಠಲನ ಮತವೆ ಹನುಮನ ಮತವೂ ॥ ೩ ॥ ಶ್ರೀಃ ॥

೧೧೦. ರಾಗ ನಾದನಾಮಕ್ರಿಯೆ, ಆದಿತಾಳ.

ಮಧ್ವಮುನಿಯೆ ನಮ್ಮ ಗುರು ಮಧ್ವಮುನಿಯೆ । ಮಧ್ವಮುನಿಯು ನಮ್ಮೆಲ್ಲರ ಉದ್ಧರಿಸುವ ಕಾಣಿರೋ ॥ ಪಲ್ಲ ॥ ಅಂದು ಹನುಮಂತನಾಗಿ । ಬಂದು ರಾಮರ ಪಾದಾರ ॥ ವಿಂದಗಳಿಗೆರಗ್ಯತಿ । ಅಂದದಿಂ ಶೋಭಿಸುವಂಥಾ ॥ ೧ ॥ ಏಣಾಂಕ ವಂಶದಿ ಪುಟ್ಟಿ । ಕ್ಷೋಣಿಪಾಲಕರ ಶಿರೋ ॥ ಮಾಣಿಕ್ಯವಾಗಿ ಹರಿಯ । ಪ್ರಾಣನೆಂದೆನಿಸಿಕೊಂಡ ॥ ೨ ॥ ಕಟ್ಟಕಡೆಯಲ್ಲಿ ಹೋಗಿ । ಧಿಟ್ಟನಾಗಿ ಪುರಂದರ ॥ ವಿಟ್ಠಲ ವೇದವ್ಯಾಸರ । ಪೆಟ್ಟಿಗೆ ಮುಂದೊಪ್ಪುವಂಥ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೧೧. ರಾಗ ಸಾವೇರಿ, ತ್ರಿಪುಟತಾಳ.

ನಿನ್ನ ನಂಬಿದೆ ನೀರಜನಯನಾ । ಎನ್ನ ಪಾಲಿಸೊ ಇಂದಿರೆರಮಣ ॥ ॥ ಪಲ್ಲ ॥ ಮುನ್ನ ಪಾಂಚಾಲಿಯ ಮೊರೆಯ ಲಾಲಿಸಿ ಕಾಯ್ದ । ಪನ್ನಗಶಯನ ನೀ ಪರಮಪುರುಷನೆಂದು ॥ ಅನುಪಲ್ಲ ॥ ಹರಿ ಸರ್ವೋತ್ತಮನಹುದೆಂಬೊ ಬಾಲಕಗೆ । ಹಿರಣ್ಯಕಶಿಪು ಪಿಡಿದು ಬಾಧಿಸಲು ॥ ನರಹರಿರೂಪದಿಂದವನ ವಕ್ಷವ ಸೀಳ್ದ । ಪರವಿಶ್ವಾತ್ಮಕನಹುದೆಂದು ನಾ ದೃಢವಾಗಿ ॥ ೧ ॥ ಪಾದವ ಪಿಡಿದೆಳೆವ ನಕ್ರನ ಕೈಯ್ಯ । ಬಾಧೆ ತಾಳದೆ ಕರಿ ಮೊರೆಯಿಡಲೂ ॥ ಆದಿಮೂರುತಿ ಚಕ್ರದಿ ನಕ್ರನ ಕೊಂದ । ವೇದಾಂತವೇದ್ಯ ಅನಾಥ ರಕ್ಷಕನೆಂದು ॥ ೨ ॥ ಇಳೆಗೊಡೆಯನ ತೊಡೆಗೆ ನೀನರ್ಹನಲ್ಲೆಂದು । ಲಲನೆ ಕೈಪಿಡಿದೆಳೆಯಲು ಕಂದನಾ ॥ ನಳಿನಾಕ್ಷ ನಿನ್ನ ಮರೆಯ ಹೊಕ್ಕು ತಪಿಸಲು । ಒಲಿದು ಧ್ರುವಗೆ ನಿಜಲೋಕ ವಿತ್ತವನೆಂದು ॥ ೩ ॥ ಸುದತಿ ಗೌತಮಸತಿ ಮುನಿಶಾಪದಿಂದಲಿ । ಒದಗಿ ಪಾಷಾಣಾಗಿ ಬಿದ್ದಿರಲೂ ॥ ಪದರಜದಿಂದಲಿ ಸತಿಯ ಮಾಡಿದ ಯೋಗಿ । ಹೃದಯ ಭೂಷಣ ನಿನ್ನ ಪದದ ಮಹಿಮೆ ಕಂಡು ॥ ೪ ॥ ಪರಮಪಾವನ ಜಗದೇಕ ಮಾತೆಯನು । ದುರುಳ ರಾವಣನೊಯ್ದು ಇರುತಿರಲೂ ॥ ಶರಣೆಂದು ವಿಭೀಷಣ ಚರಣಕೆರಗಲಾಗಿ । ಸ್ಥಿರಪಟ್ಟವನು ಕೊಟ್ಟ ಪರಮಾತ್ಮನಹುದೆಂದು ॥ ೫ ॥ ಅಂಬರೀಷನೆಂಬ ನೃಪತಿ ದ್ವಾದಶಿವ್ರತ । ಸಂಭ್ರಮದಿ ಹರಿಗರ್ಪಿಸಲೂ ॥ ಡೊಂಬಿಯಿಂದ ದೂರ್ವಾಸ ಶಪಿಸಲಾಗಿ । ಬೆಂಬಿಡದಲೆ ಚಕ್ರದಿಂದ ಕಾಯ್ದವನೆಂದು ॥ ॥ ೬ ॥ ಧರೆಯೊಳು ನಿಮ್ಮ ಮಹಿಮೆಯ ಪೊಗಳುವರೆ । ಸರಸಿಜೋದ್ಭವ ಶೇಷಗಸಾಧ್ಯವೂ ॥ ಸ್ಮರಣೆ ಮಾತ್ರದಿ ಅಜಾಮಿಳಗೆ ಮುಕ್ತಿಯನಿತ್ತ । ಪುರಂದರವಿಠಲ ಜಗದೀಶನೆಂದು ಮನದೀ ॥ ೭ ॥ ಶ್ರೀಃ ॥

## ೧೧೨. ರಾಗ ಶಂಕರಾಭರಣ, ತ್ರಿಪುಟತಾಳ.

ಹೋಗದಿರೆಲೊ ರಂಗ ಬಾಗಿಲಿಂದಾಚೆಗೆ । ಭಾಗವತರು ಕಂಡರೆತ್ತಿ ಕೊಂಡೊಯ್ವರು ॥ ಪಲ್ಲ ॥ ಸುರಮುನಿಗಳು ತಮ್ಮ ಹೃದಯಗಹ್ವ

ರದಲ್ಲಿ । ಪರಮಾತ್ಮನ ಕಾಣದರಸುವರೊ ॥ ದೊರಕದ ವಸ್ತುವು ದೊರಕಿತು ನಮಗೆಂದು । ಹರುಷದಿಂದಲಿ ಬಂದು ಕರದೆತ್ತಿಕೊಂಬರೊ ॥ ೧ ॥ ಅಗಣಿತಗುಣ ನಿನ್ನ ಜಗದ ನಾರಿಯರೆಲ್ಲ । ಹಗರಣ ಮಾಡ್ವರು ಗೋಪಾಲನೆ ॥ ಮಗುಗಳ ಮಾಣಿಕ್ಯ ತಗಲಿತು ಕರಕೆಂದು । ಮಿಗಿಲು ವೇಗದಿ ಬಂದು ಬಿಗಿದಪ್ಪಿಕೊಂಬರು ॥ ೨ ॥ ದುಷ್ಟ ನಾರಿಯರು ತಮ್ಮಿಷ್ಟವ ಸಲಿಸೆಂದು । ಅಟ್ಟಿಟ್ಟಿ ಬೆನ್ಹತ್ತಿ ತಿರುಗುವರೋ ॥ ಸೃಷ್ಟೀಶ ಪುರಂದರವಿಠಲರಾಯನೆ । ಇಷ್ಟಿಷ್ಟು ಬೆಣ್ಣೆಯ ಕೊಟ್ಟೆನೊ ಗೋಪಾಲಾ ॥ ೩ ॥

## ೧೧೩. ರಾಗ ದ್ವಿಜಾವಂತಿ, ಆದಿತಾಳ.

ನೆನೆಯಿರೊ ಭಕ್ತ ಜನರುಗಳು ಅನುದಿನ । ಘನಮಹಿಮನ ಸೇವೆಯ ಮಾಡಿದರೆ । ಮನದಲ್ಲಿ ನೆನೆದಂಥ ಅಭೀಷ್ಟವನೀವ ಹನುಮಂತ ॥ ॥ ಪಲ್ಲ ॥ ಒಂದು ಯುಗದಲ್ಲಿ ಹನುಮಾವತಾರನಾಗಿ । ಬಂದು ನೆರದಾಯೋಧ್ಯಾಪುರಕಾಗಿ ॥ ಬಂದ ಧೀರನ ನೋಡಿ ಸುಜನರೆಲ್ಲಾ । ನಂದದಿಂದಲಿ ಪಾಡಿ ॥ ೧ ॥ ವಾಯುಕುಮಾರಕ ದ್ವಾಪರದಲ್ಲಿ ಭೀಮ । ರಾಯನೆಂದೆನಿಸಿದ ಕೌರವರ ಬಲದಿ ॥ ನಾಯಕನಾಗಿ ಬಂದು ದುಶ್ಶಾಸನನ । ಕಾಯವನಳಿಸಿ ನಿಂದೂ ॥ ೨ ॥ ಕಾಯಜಪಿತನ ಮುಂದೆ ಕೌರವರ ತರಿದು ರಾಜ । ಸೂಯಯಾಗವ ಮಾಡಿದ ಬಲವಂತ ॥ ರಾಯರಾಯರ ಧೀರ ಹನುಮಂತ । ಪ್ರಿಯಜನ ಮಂದಾರ ॥ ೩ ॥ ಗುರುಮಧ್ವಮುನಿಯಾಗಿ ಹರಿಗತಿಪ್ರಿಯನಾಗಿ । ಕರುಣಾಕರನಾಗಿ ಶರಣರ ಪೊರೆವಾ ॥ ಮೆರೆವ ಶ್ರೀಹನುಮಂತನಾ ಈ ದೇವನ । ಸ್ಮರಿಸಿರೋ ಗುಣವಂತನಾ ॥ ೪ ॥ ಲಂಕಾಪಟ್ಟಣ ಸಮೀಪ ಸಮುದ್ರವ ದಾಟಿ । ಪಂಕಜನಾಭ ಶ್ರೀಪುರಂದರವಿಠಲ ನಿ ॥ ಶ್ಶಂಕ ರಾವಣನ ಗೆದ್ದ ಈ ಹನುಮಂತ । ಪಂಕಜಮುಖಿಯಳ ನೋಡ್ದಾ ॥ ೫ ॥ ಶ್ರೀಃ ॥

## ೧೧೪. ರಾಗ ಮುಖಾರಿ, ಅಟತಾಳ.

ಬಾರಯ್ಯ ರಂಗ ಬಾರಯ್ಯ । ಕೃಷ್ಣ ಬಾರಯ್ಯ । ಸ್ವಾಮಿ ಬಾರಯ್ಯ । ವಾರಣಭಯನಿವಾರಣಮಾಡಿದ ಕೃಷ್ಣ ॥ ಪಲ್ಲ ॥ ವೇದ

ಲಿಂದ ಬರಬಾರದಿದ್ದರ್ ನಾ ಬಂದೆ । ತುದಿ ಮೊದಲಿಲ್ಲದ ನಿಂದ್ಯ ಹೊಂದಿದೆ ॥ ಇದು ಗೆದ್ದು ಹೋಗುವದೆಂತೊ ನಾ ಮುಂದೆ । ಪದುಮ ನಾಭನೆ ತಪ್ಪು ಕ್ಷಮಿಸೊ ತಂದೆ ॥ ೧ ॥ ಹೆಣ್ಣು ಹೊನ್ನು ಮಣ್ಣಿನಾಶೆ ಯೊಳಿದ್ದು । ಪುಣ್ಯಪಾಪಗಳ ನಾನರಿತಿದ್ದು ॥ ಅನ್ಯಾಯವಾಯಿತು ಇದ ಕೇನೊ ಮದ್ದು । ನಿನ್ನ ಧ್ಯಾನವ ಕೊಡೊ ಹೃದಯದೊಳಿದ್ದು ॥ ೨ ॥ ಇಂದೆನ್ನ ಪೂರ್ವದ ಪಾಪವ ಕಳೆದು । ಮುಂದೆನ್ನ ಜನ್ಮ ಸಫಲವಾಯಿ ತೆಂದು ॥ ತಂದೆ ಶ್ರೀಪುರಂದರವಿಠಲ ನೀನಿಂದು । ಬಂದು ಸಲಹೊ ಎನ್ನ ಹೃದಯದೊಳ್ನಿಂದು ॥ ೩ ॥ ಶ್ರೀಃ ॥

## ೧೧೫. ರಾಗ ಶಹನ, ಛಾಪುತಾಳ.

ನೋಡುವದೆ ಕಣ್ಣು ಕೇಳುವದೆ ಕಿವಿ । ಪಾಡುವದೆ ವದನ । ಗಾಡಿ ಗಾರ ಕೃಷ್ಣರಾಯನ ಕೂಡಿ ॥ ಪಲ್ಲ ॥ ಎಳೆ ತುಲಸಿಯ ವನಮಾಲೆ ಯಿಂದೊಪ್ಪುವ । ಎಳೆಯ ಗೋವಳರೊಡನಾಡುವನಾ ॥ ತಳಿರು ತರು ವಿನ ನೆಳಲಲ್ಲಿ ನಲಿವನ । ನಳಿನನಾಭನ ಮುಗುಳುನಗೆಯ ಸೊಬ ಗನೊ ॥ ೧ ॥ ನವಿಲಂತೆ ನಲಿವ ಹಂಸದಂತೆ ಕುಣಿವನ । ಎಳೆ ಕೋಗಿ ಲಂತೆ ಕೂಗುವನ ॥ ಎರಳೆಯಂತೆ ಜಿಗಿಜಿಗಿದಾಡುವ ತುಂಬಿ । ತಲೆಯ ತಗ್ಗಿಸುವಂತೆ ಝೇಂಕರಿಸುವನ ॥ ೨ ॥ ಮುಲ್ಲೆ ಮಲ್ಲಿಗೆ ಜಾಜಿ ಪೂಮಾಲೆ ಧರಿಸಿ । ಚೆಲ್ವೆಯರಿಗೆ ಮುಡಿಸುವನ ॥ ಜಲಕ್ರೀಡೆ ಮೊದಲಾದಾಟವಾ ಡುವ । ಚೆಲ್ವ ಕಂಗಳ ಮುದ್ದು ಫುಲ್ಲನಯನನಾ ॥ ೩ ॥ ಪೊಂಗೊಳ ಲೂದುತ್ತ ಮೃಗಪಕ್ಷಿಗಳನೆಲ್ಲ । ಸಂಗಡಿಸುತ್ತಲಿಪ್ಪನಾ ॥ ಅಂಗವ ಮರೆದ ಸುರಾಂಗನೆಯರ ಬೆಳ । ದಿಂಗಳೊಳಗೆ ಕೂಡಿ ಕುಣಿದಾಡುವ ದೇವನ ॥ ೪ ॥ ಕುರೂಪಿ ಕುಬ್ಜೆ ತಿದ್ದಿ ರೂಪಳ ಮಾಡಿ । ಶರಗ ಪಿಡಿದು ಕೊಂಡನಾ ॥ ಕರುಣಾಕರ ಗುರು ಪುರಂದರವಿಠಲನ । ಶರಣಾಗತರಕ್ಷ ರನೆಯ ರಮಣನಾ ॥ ೫ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೧೧೬. ರಾಗ ಆನಂದಭೈರವಿ, ಆದಿತಾಳ.

ಸ್ವಾಮಿ ಮುಖ್ಯಪ್ರಾಣ । ನಿನ್ನ । ಮರೆವರ ಗಂಟಲ ಗಾಣ ॥ ಹಿಡಿದ್ಯೋ ರಾಮರ ಚರಣ । ನೀ । ನ್ಯಾಧಾದೊ ಜಗತ್ರಾಣ ॥ ಪಲ್ಲ ॥ ಸಂಜೀವನ ಪರ್ವತವಾ । ನೀ । ನಂಜದೆ ತಂದ್ಯೋ ದೇವಾ ॥ ಅಂಜನಿ ಸುತ ಸದಾ ಕಾವಾ । ಹೃ । ತ್ಕಂಜವಾಸ ಸರ್ವಜೀವಾ ॥ ೧ ॥ ಏಕಾದಶಿಯು ರುದ್ರ । ನೀ । ವೈದ್ಯೋ ರಾಮರ ಮುದ್ರ ॥ ಸಕಲ ವಿದ್ಯಾಸಮುದ್ರ । ನೀ । ನ್ಯಾಧಾದೋ ಬಲಭದ್ರ ॥ ೨ ॥ ವೈಕುಂಠದಿಂದ ಬಂದು । ನೀ । ಪಂಪಾ ಕ್ಷೇತ್ರದಿ ನಿಂದು ॥ ಯಂತ್ರೋದ್ಧಾರಕನೆಂದು । ಪು । ರಂದರ ವಿಠಲ ಸಲಹೆಂದು ॥ ೩ ॥ ಶ್ರೀಃ ॥

೧೧೭. ರಾಗ ನವರೋಜು, ಆದಿತಾಳ.

ನಂಬಿದೆ ನಿನ್ನ ಪಾದವಾ । ವೆಂಕಟರಮಣ । ನಂಬಿದೆ ನಿನ್ನ ಪಾದವಾ ॥ ॥ ಪಲ್ಲ ॥ ನಂಬಿದೆ ನಿನ್ನ ಪಾದಾಂಬುಜಯುಗಳವ । ಚಂದದಿ ಸಲಹೊ ಮಂದರಧರನೆ ॥ ಅನುಪಲ್ಲ ॥ ತಂದೆಯಾಗಿ ನೀನೆ । ತಾಯಿ ಯು ನೀನೆ । ಬಂಧುಬಳಗವು ನೀನೆ ॥ ಬಂದ ದುರಿತವೆಲ್ಲ ಹೊಂದಿ ಕೊಳ್ಳದಂತೆ । ಬಂದೆನ್ನ ಸಲಹೊ ಮುಕುಂದ ಮುರಾರಿ ॥ ೧ ॥ ಚಿಕ್ಕಂದು ಮೊದಲು ನಾನು । ನಿನ್ನಯ ಪಾದ । ಹೊಕ್ಕು ಜೀವಿಸುತಿ ಹೆನು ॥ ಛಕ್ಕನೆ ಜ್ಞಾನವ ಅಕ್ಕರಿಂದಲೆ ಕೊಡು । ಮಕ್ಕಳ ಮಾಣಿಕ್ಯ ರುಗ್ಮಿಣಿಯರಸಾ ॥ ೨ ॥ ಮರೆತು ಮಾಯದೊಳು ಮುಳುಗಿದೆ । ಮಾಯಾ । ಮರೆತು ಅರಿಯದಾದೆ ॥ ಮರೆಯದೆ ಎನ್ನನು ಸಲಹೊ ಕೃಪಾನಿಧಿ । ವರದ ಶ್ರೀವೆಂಕಟ ಪುರಂದರವಿಠಲ ॥ ೩ ॥ ಶ್ರೀಃ ॥

೧೧೮. ರಾಗ ನಾದನಾಮಕ್ರಿಯೆ, ಆದಿತಾಳ.

ನೀನೆ ಅನಾಥ ಬಂಧು । ಕಾರುಣ್ಯ ಸಿಂಧು । ನೀನೆ ಅನಾಥ ಬಂಧು ॥ ॥ ಪಲ್ಲ ॥ ಪತಿಗಳೈವರಿದ್ದರೇನು । ಸತಿಯ ಭಂಗಕೊದಗಲಿಲ್ಲ ॥ ಗತಿ ನೀನೆ ಮುಕುಂದನೆಂದರೆ । ಅತಿ ವೇಗದಿ ಬಂದೊದಗಿದೆ ಕೃಷ್ಣ ॥ ೧ ॥

ಮದಗಜವೆಲ್ಲ ಕೂಡಿದರೇನು । ಆದರ ಸಮಯಕ್ಕೊದಗಲಿಲ್ಲ ॥ ಮದನ ನಯ್ಯ ಮಧುಸೂದನನೆಂದರೆ । ಮುದದಿಂದಲಿ ಬಂದೊದಗಿದೆ ಕೃಷ್ಣ ॥ ॥ ೨ ॥ ಶಿಲೆಯ ಮೆಟ್ಟಿ ಕುಲಕೆ ತಂದೆ । ಬಲಿಯ ಬೇಡಿ ಸತ್ಪದವಿಯ ನಿತ್ತೆ ॥ ಸುಲಭದಿ ಭಜಿಸುವ ಭಕ್ತರ ಸಲಹುವ । ಚೆಲುವ ಪುರಂದರ ವಿಠಲರಾಯ ॥ ೩ ॥ ಶ್ರೀಃ ॥

✓ ೧೧೯. ರಾಗ ನಾದನಾಮಕ್ರಿಯೆ, ಆದಿತಾಳ.

ಯಾರು ಬಿಟ್ಟರು ಕೈಯ ನೀ ಬಿಡದಿರು ಕಂಡ್ಯ । ನಾರಾಯಣ ॥ ಸ್ವಾಮಿ ॥ ನೀ ಬಿಟ್ಟರೆ ಮುಂದಿನ್ಯಾರು ಕಾಯ್ವರ ಕಾಣೆ । ನಾರಾಯಣ ॥ ॥ ೧ ॥ ಮುಂದೆ ನೋಡಿದರೆ ಹೆಬ್ಬಾವು ನುಂಗುತಲಿದೆ । ನಾರಾಯಣ ॥ ಸ್ವಾಮಿ ॥ ಹಿಂದೆ ನೋಡಿದರೆ ಹೆಬ್ಬುಲಿ ಬಾಯ್ಬಿಡುತಿದೆ । ನಾರಾಯಣ ॥ ॥ ೨ ॥ ನಂಬಿ ನಾ ಪಿಡಿದರೆ ಕೊಂಬೆಲ್ಲ ಮುರಿದಾವು । ನಾರಾಯಣ ॥ ಸ್ವಾಮಿ ॥ ತುಂಬಿದ ಹೊಳೆಯಲ್ಲಿ ಹರಗೋಲನೇರಿದೆ । ನಾರಾಯಣ ॥ ॥ ೩ ॥ ಶಿಶುವವತಾರದಿ ಪಶುಗಳ ನೀ ಕಾಯ್ದೆ । ನಾರಾಯಣ ॥ ಸ್ವಾಮಿ ॥ ದಶ ಅವತಾರದಿ ಚಕ್ರವ ತಾಳಿದೆ । ನಾರಾಯಣ ॥ ೪ ॥ ವಿಷದ ಕಾಳಿಂಗನ ಮಡುವ ಧುಮುಕಿ ಬಂದೆ । ನಾರಾಯಣ ॥ ಸ್ವಾಮಿ ॥ ವಸುಧೆಯೊಳ ಧಿಕ ಪುರಂದರವಿಠಲನೆ । ನಾರಾಯಣ ॥ ೫ ॥ ಶ್ರೀಃ ॥

೧೨೦. ರಾಗ ತೋಡಿ, ಆದಿತಾಳ.

ನೀನೆ ದಯಾಸಂಪನ್ನನೊ । ಕಾವೇರಿರಂಗ । ನೀನೆ ಬ್ರಹ್ಮಾದಿ ವಂದ್ಯನೋ ॥ ಪಲ್ಲ ॥ ಬಂಧುಗಳೆಲ್ಲರ ಮುಂದಾ ದ್ರುಪದನ । ನಂದನೆ ಯಳ ತಂದು ಶೀರೆಯ ಶೆಳೆಯಲು ॥ ಬಂದು ಕೃಷ್ಣ ಸಲಹೆಂದರೆ ಅಕ್ಷಯ । ವೆಂದು ಕಾಯ್ದ ಗೋವಿಂದನು ನೀನೆ ॥ ೧ ॥ ನಿಂದಿತ ಕರ್ಮವ ನೊಂದುಳಿಯದೆ ಬೇ । ಕೆಂದು ಮಾಡಿದಾನಂದಜಾಮಿಳನು ॥ ಕಂದನ ನಾರಗನೆಂದರೆ ಮುಕ್ತಿಯ । ಕುಂದದೆ ಇತ್ತ ಮುಕುಂದನು ನೀನೇ ॥ ॥ ೨ ॥ ಮತ್ತಗಜವ ನೆಗಳೊತ್ತಿ ಪಿಡಿಯೆ ಬಲು । ಒತ್ಯಧರೋಷ್ಠದಿ

ವೃತ್ಯ್ಯವಿನಂತಿರೆ ॥ ಭಕ್ತರ ಸಲಹುವ ಪುರಂದರವಿಠಲ । ಹಸ್ತಿಗೊಲಿದ ಪರ ವಸ್ತುವು ನೀನೇ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೧೨೧. ರಾಗ ಪೂರ್ವಿ, ಅಟತಾಳ.

ನಾ ನಿನ್ನ ಧ್ಯಾನದೊಳಿರಲು ಮಿಕ್ಕ । ಮಾನವರೇನು ಮಾಡುವರು ಗೋಪಾಲಾ ॥ ಪಲ್ಲ ॥ ಮತ್ಸರಿಸಿದರೇನು ಮಾಡಲಾಪರು ಎನ್ನ । ಅಚ್ಯುತಾನಂತನ ಕೃಪೆಯಿರಲು ॥ ನಿಚ್ಚದೊಳಗೆ ನಿನ್ನ ನಾಮವ ಜಪಿಸಲು । ಕಿಚ್ಚಿಗೆ ಇರುವೆ ಮುತ್ತುವದೆ ಹೇಳೆಲೊ ರಂಗ ॥ ೧ ॥ ಧಾಳಿಲಿ ಕುದುರೆ ವೈಯಾರದಿ ತಿರುಗಲು । ಧೂಳು ರವಿಗೆ ತಾ ಮುಸುಕುವದೆ ॥ ತಾಳಿದವರಿಗೆ ವಿರುದ್ಧ ಲೋಕದೊಳುಂಟೆ । ಘಾಳಿಗೆ ಗಿರಿ ನಡುಗುವುದೆ ಪೇಳೆಲೊ ರಂಗ ॥ ೨ ॥ ಕನ್ನಡಿಯೊಳಗಣ ಗಂಟೆ ಕಂಡು ಕಳ್ಳ । ಕನ್ನವಿಕ್ಕಲವನ ವಶವಹುದೆ ॥ ನಿನ್ನ ನಂಬಿದೆ ನೀ ಎನ್ನ ಸಲಹಬೇಕೊ । ಪನ್ನಗಶಯನ ಶ್ರೀಪುರಂದರವಿಠಲಾ ॥ ೩ ॥ ಶ್ರೀಃ ॥

೧೨೨. ರಾಗ ಮುಖಾರಿ, ಝಂಪೆತಾಳ.

ಪಥ ನಡೆಯುದಯ್ಯ ಪರಲೋಕಕ್ಕೈದುವರೆ ಮ । ನ್ಮಥನೆಂಬ ಕಳ್ಳ ಮಾರ್ಗವ ಕಟ್ಟಿ ಸುಲಿಯುತಿರೆ ॥ ಪಲ್ಲ ॥ ಗಿಳಿವಿಂಡು ಕೋಗಿಲೆ ವಸಂತ ಭ್ರಮರವು ಮರುತ । ಬಲವೆರಸಿ ಮದನ ಮಾರ್ಗವ ಕಟ್ಟಲು ॥ ಬಲವುಳ್ಳ ಭಟರು ಬಲು ಸನ್ಯಾಸಿ ಯೋಗಿಗಳು । ಸುಲಿಸಿಕೊಂಡರು ಕೆಲರು ಸಿಕ್ಕಿದರು ಕೆಲರು ॥ ೧ ॥ ತನುರೋಮ ಗಿಡವೃಕ್ಷ ತಳಿತ ಭುಜಲತೆ ಮೆರೆಯೆ ಘನ ಸಿಂಹ ಖಗ ಮೃಗಗಳಟ್ಟಣಿಸುತ ॥ ವನಿತೆಯರ ಕಾಯ ಕಾಂತಾರ ಬಲು ದುರ್ಗಮದ । ಸ್ತನ ಪರ್ವತದ ಕಣಿವೆಯಲಿ ಕಟ್ಟಿ ಸುಲಿವುತಿರೆ ॥ ೨ ॥ ಕಾಳಗದೊಳಿದಿರಿಲ್ಲ ಸುರನರೋರಗರ ಕ । ಟ್ವಾಳು ಮನ್ಮಥನ ಛಲದಂಕ ಬಿರಿದು ॥ ಪೇಳಲೆನ್ನಳವಲ್ಲ ಪುರಂದರವಿಠಲನ । ಆಳು ಸಂಗಡವಿದ್ದವರಿಗಿಲ್ಲ ಭಯವು ॥ ೩ ॥ ಶ್ರೀಃ ॥

## ೧೨೩. ರಾಗ ಪೂರ್ವಿ, ಅಟತಾಳ.

ಬರಿದೆ ಹೋಯಿತು ಹೊತ್ತು ॥ ಪಲ್ಲ ॥ ನರಜನ್ಮ ಸ್ಥಿರವೆಂದು ನಾನಿದ್ದೆ ದೇವಾ ॥ ಅನುಪಲ್ಲ ॥ ಆಶೆಯೆಂಬುದು ಎನ್ನ ಕ್ಲೇಶಬಡಿಸುತಿದೆ । ಘಾಸಿಯಾದೆನೊ ಹರಿಯೆ ಶೇಷಶಾಯಿ ॥ ವಾಸುದೇವನೆ ನಿಮ್ಮ ಧ್ಯಾನವ ಮಾಡದೆ । ನಾಶವಾಯಿತು ಜನ್ಮ ಮೋಸಹೋದೆನು ಹರಿಯೆ ॥ ೧ ॥ ಸತಿಸುತರಿವರಿಂದ ಅತಿ ಭ್ರಾಂತಿಗೊಳಗಾಗಿ । ಮತಿಹೀನನಾದೆ ಚ್ಯುತಿ ದೂರನೆ ॥ ಸತತ ನಿರಂತರ ವಿಷಯಲಂಪಟನಾದೆ । ಗತಿಗೆಡಿಸುತಿದೆ ಮನಸು ಹರಿ ಸರ್ವೋತ್ತಮನೆ ॥ ೨ ॥ ಪರರ ಸೇವೆಯ ಮಾಡಿ ಪರ ರನೆ ಕೊಂಡಾಡಿ । ಮರುಳು ತನದಲ್ಲಿ ನಾನು ಮತಿಹೀನನಾಗಿದ್ದೆ ॥ ಕರು ಣದಿಂದಲಿ ಎನ್ನ ಮರೆಯದೆ ಸಲಹಯ್ಯ । ಗುರು ಪುರಂದರವಿಠಲ ನೆರೆ ನಂಬಿದೆನೊ ॥ ೩ ॥ ಶ್ರೀ ॥

## ೧೨೪. ರಾಗ ಮುಖಾರಿ, ಝಂಪೆತಾಳ.

ಎಲ್ಲಿರುವನೊ ರಂಗನೆಂಬ ಸಂಶಯ ಬೇಡ । ಎಲ್ಲಿ ಭಕ್ತರು ಕರೆದ ರಲ್ಲಿ ಒದಗುವನು ॥ ಪಲ್ಲ ॥ ತರಳ ಪ್ರಹಲ್ಲಾದ ಶ್ರೀಹರಿ ವಿಶ್ವಮಯ ನೆಂದು । ಬರದೋದಲವನ ಪಿತ ಕೋಪದಿಂದ ॥ ಸ್ಥಿರವಾಗಿ ಜಡಿದು ಕಂಬದಿ ತೋರು ತೋರೆನಲು । ಭರದಿ ಬರಲದಕೆ ವೈಕುಂಠ ನೆರೆ ಮನೆಯೆ ॥ ೧ ॥ ಪಾಪಕರ್ಮವ ಮಾಡಿದಜಮಿಳನ ಯಮಭಟರು । ಕೋಪದಿಂದೆಳೆಯುತಿರೆ ಭೀತಿಯಿಂದ ॥ ತಾ ಪುತ್ರನನು ಕರೆಯೆ ಕೇಳಿ ರಕ್ಷಿಸೆ ಶ್ವೇತ । ದ್ವೀಪ ಈ ಧರೆಗೆ ಸಮೀಪದಲ್ಲಿಹುದೆ ॥ ೨ ॥ ಕರಿರಾಜನ ನಕ್ರ ನುಂಗುತಿರೆ ಅತಿ ಭಯದಿ । ಮೊರೆಯಿಡಲು ಕೇಳಿ ಬಲು ತ್ವರಿತ ದಿಂದ ॥ ಕರುಣದಿಂದಲಿ ಬಂದು ಬಿಡಿಸಿದ ಗಜರಾಜ । ನಿರುವ ಶರಧಿಗೆ ಅನಂತಾಸನ ಮುಮ್ಮನೆಯೆ ॥ ೩ ॥ ಕುರುಪತಿಯು ದ್ರೌಪದಿಯ ಸೀರೆ ಯನು ಸೆಳೆಯುತಿರೆ । ತರುಣಿ ಹಾ ಕೃಷ್ಣ ಎಂದೊದರೆ ಕೇಳಿ ॥ ಭರ ದಿಂದ ಅಕ್ಷಯಾಂಬರವಿತ್ತ ಹಸ್ತಿನಾ । ಪುರಿಗೂ ದ್ವಾರಕಿಗೂ ಕೂಗಳತೆ ಯೇನೂ ॥ ೪ ॥ ತೃಣದಲ್ಲಿ ಅಣು ಮಹತ್ತುಗಳಲ್ಲಿ ಪರಿಪೂರ್ಣ । ಗಣನೆ

ಯಿಲ್ಲದ ಮಹಾಮಹಿಮನೆನಿಪಾ ॥ ಘನ ಕೃಪಾನಿಧಿಯಾದ ಪುರಂದರ ವಿಠಲನು । ನೆನೆದವರ ಮನದಲ್ಲಿ ಇಹನೆಂಬ ಬಿರಿದೂ ॥ ೫ ॥ ಶ್ರೀಃ ॥

ಗ೨೫. ರಾಗ ಪೂರ್ವಿ, ಅಟತಾಳ.

ಯಮ ತನ್ನ ಪುರದಿ ಸಾರಿದನು । ನಮ್ಮ । ಕಮಲನಾಭನ ದಾಸರ ಮುಟ್ಟದಿರೆಂದು ॥ ಪಲ್ಲ ॥ ಭುಜದೊಳೊಪ್ಪುವ ಶಂಖ ಚಕ್ರ ಮುದ್ರಾಂಕಿತ । ನಿಜದ್ವಾದಶನಾಮ ಧರಿಸಿಪ್ಪರಾ ॥ ತ್ರಿಜಗಪಾವನ ತುಲಸಿಮಾಲೆ ಧರಿಸಿದ । ಸುಜನರುಗಳ ಕೆಣಕದೆ ಬನ್ನಿರೆಂದು ॥ ೧ ॥ ತಾಳ ದಂಡಿಗೆ ನೃತ್ಯ ಗೀತ ಸಮ್ಮೇಳದಿ । ಊಳಿಗವನು ಮಾಳ್ಪ ಹರಿದಾಸರ ॥ ಕಾಣುತಲೊಮ್ಮೆ ಕರವ ಮುಗಿದು ಯಮ । ನಾಳುಗಳೆಂದು ಹೇಳದೆ ಬನ್ನಿರೆಂದು ॥ ೨ ॥ ಮಾತಾಪಿತರ ದುರ್ನೀತಿಯಿಂದಲಿ ಬೈವ । ಪಾತಕರನು ಪರದ್ರೋಹಿಗಳ ॥ ಘಾತಕರನು ಹಿಡಿದೆಳತಂದು ಬಾಯೊಳು । ಗೋತವ ಕಾಸಿ ಸುರಿದು ಕೊಲ್ಲಿರೆಂದು ॥ ೩ ॥ ಬೆನ್ನಶಿಡಿಯ ಮಾರಿ ಬೆಮ್ಮಡಿಯನುಟ್ಟು । ಬೆಮ್ಮುಖದಲಿ ಬೊಂಬೆಯನಿಡುತ ॥ ಕರ್ಮಕ್ಕೆ ಸರಿಯಾಗಿ ಹಿಂಸೆಯ ಮಾಳ್ಪರ । ಬ್ರಹ್ಮಹತ್ಯಗಾರರ ತನ್ನಿರೊ ಎಂದು ॥ ೪ ॥ ಅನ್ಯ ದೈವವ ಬಿಟ್ಟು ಅನ್ಯ ಮಂತ್ರವ ಬಿಟ್ಟು । ಪನ್ನಂಗಶಯನನೆ ಗತಿಯೆನ್ನುತ ॥ ಚೆನ್ನ ಶ್ರೀಪುರಂದರವಿಠಲನ ಸ್ಮರಿಸೊಪ್ರ । ಸನ್ನರುಗಳ ಕೆಣಕದೆ ಬನ್ನಿರೆಂದು ॥ ೫ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

ಗ೨೬. ರಾಗ ಕಲ್ಯಾಣಿ, ಅಟತಾಳ.

ಒಂದೇ ಕೂಗಳತೆ । ಶ್ರೀವೈಕುಂಠ । ಒಂದೇ ಕೂಗಳತೆ । ಸಂದೇಹವಿಲ್ಲ ಸಾಧು ಸಜ್ಜನರಿಗೆ ॥ ಪಲ್ಲ ॥ ಸರೋವರದಲಿ ಆನೆಗಳ ಹಿಂಡು ಕೂಗಲು । ಕರುಣದಿಂದಲಿ ಬಂದು ಕಾಯ್ದಾತನು ॥ ಕರಿರಾಜವರದ ಸಲಹೊ ಎಂತೆಂದರೆ । ತರಳ ಪ್ರಹ್ಲಾದಗೆ ಕಂಭದಿಂದಲಿ ಬಂದ ॥ ೧ ॥ ಅಂಬರೀಷ ದ್ವಾದಶಿವ್ರತಮಾಡಲು । ಡೊಂಬಿಯ ಮಾಡಿದ ದೂರ್ವಾಸನು ॥

ಕುಂಭಿನಿಪತಿ ಕೃಷ್ಣಾ ಕಾಯೆಂದು ಮೊರೆಯಿಡೆ । ಇಂಬಿಟ್ಟ ಚಕ್ರದಿ ಮುನಿಶಾಪವನ್ನು ॥ ೨ ॥ ದ್ರುಪದರಾಯನ ಪುತ್ರಿ ಆಪತ್ತು ಕಳೆಯೆನೆ। ಕೃಪೆಯಿಂದ ಅಕ್ಷಯವಿತ್ತ ತಾನು ॥ ಕಪಟನಾಟಕ ಸ್ವಾಮಿ ಪುರಂದರ ವಿಠಲನ । ಗುಪಿತದಿ ನೆನೆವರ ವದನ ವೈಕುಂಠವೂ ॥ ೩ ॥ ಶ್ರೀಃ ॥

## ೧೨೭. ರಾಗ ದೇಶಿ ತೋಡಿ, ತ್ರಿಪುಟತಾಳ.

ಧರಣಿಗೆ ಧೊರೆಯೆಂದು ನಂಬಿದೆ । ಇಂಥ । ಪರಮ ಲೋಭಿ ಯೆಂಬೊದರಿಯೆ ಶ್ರೀಹರಿಯೆ ॥ ಪಲ್ಲ ॥ ಕಾಡಿ ಬೇಡುವರಿಗೆ ಕೊಡ ಲಾರದೆ ಅಂಜಿ । ಓಡಿ ನೀರೊಳು ಸೇರಿಕೊಂಡೆ ಬೇಗ ॥ ಏಡಿಯ ತೆರದಿ ಮೋರೆಯ ತೋರದದರಿಂದ । ಓಡಿ ಅರಣ್ಯದಿ ಮೃಗಗಳ ಸೇರಿದೆ ॥ ೧ ॥ ಬಡವರ ಬಿನ್ನಪವನು ಲಾಲಿಸದೆ ಹಲ್ಲ । ಕಡು ಕೋಪದಲಿ ಕೆರದಂಜಿ ಸಿದೆ ॥ ತಡೆಯದೆ ಭಿಕ್ಷುಕನಾದರೆ ಬಿಡರೆಂದು । ಕೊಡಲಿಯ ಪಿಡಿದು ಕೋಡಗವ ಕಾಯ್ದೆಯಾ ॥ ೨ ॥ ಉತ್ತಮನೆಂದರೆ ಮತ್ತೆ ಚೋರನಾದೆ। ಬತ್ತಲೆ ನಿಂತು ತೇಜಿಯನೇರಿದೆ ॥ ಎತ್ತ ಹೋದರೂ ಬಿಡೆ ಬಿಡೆ ನಿನ್ನ ಪಾದವ । ಚಿತ್ತಜ ಜನಕ ಶ್ರೀಪುರಂದರವಿಠಲಾ ॥ ೩ ॥ ಶ್ರೀಃ ॥

## ೧೨೮. ರಾಗ ಮಧ್ಯಮಾವತಿ, ಛಾಪುತಾಳ.

ಇಲ್ಲಿರಲಾರೆ ಅಲ್ಲಿಗೆ ಪೋಗಲಾರೆ । ಫುಲ್ಲನಾಭ ಕೃಷ್ಣ ನೀನಿದ್ದಲ್ಲಿಗೆ ಸೆನ್ನ ॥ ಪಲ್ಲ ॥ ಜನನವ ಒಲ್ಲೆ ಮರಣವನೊಲ್ಲೆ । ದುರಿತ ಕೋಟಲೆ ಸಂಸಾರವನೊಲ್ಲೆ ॥ ತುರುಕಾದು ಕೊಳಲೂದೋ ಅಸುರ ಮರ್ದನ ನಿನ್ನ । ಚರಣಕಮಲದ ಸ್ಮರಣೆಯೊಳಿರಿಸೆನ್ನ ॥ ೧ ॥ ಬಂದು ಸಂಸಾರ ಬೇನೆಯೊಳಗೆ ಬಿದ್ದು । ನೊಂದೆನೋ ಕಡು ಮೋಹದಿಂದಾ ಬೆಂದು ॥ ನಂದಗೋಪನ ಕಂದ ವೃಂದಾವನ ಪ್ರಿಯ । ಎಂದೆಂದು ತವ ಪಾದ ಸ್ಮರಣೆಯೊಳಿರಿಸೆನ್ನ ॥ ೨ ॥ ಪುತ್ರ ಪೌತ್ರ ಕಳತ್ರ ಬಾಂಧವರೆಂಬೊ । ಕತ್ತಲೆಯೊಳು ಕಡು ನೊಂದೆನಯ್ಯ ॥ ಛತ್ರ ಚಾಮರ ಕೋಟಿ ಉಡು ಪಿಯ ಸಿರಿಕೃಷ್ಣ । ಭಕ್ತರ ಸಲಹುವ ಪುರಂದರವಿಠಲ ॥ ೩ ॥ ಶ್ರೀಃ ॥

## ೧೨೯. ರಾಗ ಕಾಪಿ, ಅಟತಾಳ.

ಧಣಿಯ ನೋಡಿದೆ ವೆಂಕಟನ । ಮನ । ದಣಿಯ ನೋಡಿದೆ ಶಿಖಾಮಣಿ ತಿರುಮಲನ ॥ ಪಲ್ಲ ॥ ಚರಣದಂದುಗೆ ಗೆಜ್ಜೆಯುವನ । ಪೀತಾಂಬರ ಉಡಿಗೆ ಒಡ್ಯಾಣವಿಟ್ಟಿಹನಾ ॥ ಮೆರೆಯುವ ಮಾಣಿಕ್ಯದವನ । ಚನ್ನ । ಸರ ಹಾರ ಪದಕ ಕೌಸ್ತುಭ ಧರಿಸಿದನಾ ॥ ೧ ॥ ಕೊರಳೊಳು ವೈಜಯಂತಿ ಇಹನಾ । ಕಿರು । ಬೆರಳ ಮುದ್ರಿಕೆ ಭುಜಕೀರ್ತಿಲೊಪ್ಪುವನ । ಅರಳು ಕಂಗಳ ನೋಟದವನ । ಸುಳಿ । ಗುರುಳು ನೊಸಲು ಪಟ್ಟೆನಾಮ ಹಚ್ಚಿಹನಾ ॥ ೨ ॥ ಶಂಖಚಕ್ರವ ಪಿಡಿದಿಹನ । ಕೈ । ಕಂಕಣ ತೋಳ್ಬಂದಿ ಬಾಪುರಿಯುವನ ॥ ಶಂಖನೂದುವ ಸರ್ವೋತ್ತಮನ । ಭೂ । ವೈಕುಂಠವಿದೆಂದು ಹಸ್ತದಿ ತೋರಿಸುವನಾ ॥ ೩ ॥ ಕೇಸಕ್ಕಿ ಅನ್ನ ಉಂಬುವನಾ । ಬಡ್ಡಿ । ಕಾಸು ಬಿಡದ ಹಾಗೆ ಕೂಡಿ ಹಾಕುವನಾ ॥ ಘೋಷಾನಾದಕ್ಕೆ ಒಲಿದಿಹನಾ । ವೈಯೊಳ್ । ಸೂಸುವ ಗಂಧ ಕಸ್ತೂರಿ ಲೇಪಿತನ ॥ ೪ ॥ ನೀಟಾದ ವಲ್ಲಿ ಹೊದ್ದಿಹನಾ । ಹೊರ । ಬೇಟೆಯಾಡಿ ಆಂದದಿಂದ ಬರುವನ ॥ ನೋಟದಿ ಬಂದು ನಿಂತಿಹನ । ಈ । ಸೃಷ್ಟಿಗೊಡೆಯ ಪುರಂದರವಿಠಲನ ॥ ೫ ॥ ಶ್ರೀಃ ॥

## √೧೩೦. ರಾಗ ತುಜಾವಂತಿ, ಆದಿತಾಳ.

ಹೋಗಬೇಡ ನಿಗಮಾನುತ ಮಧುರೆಗೆ । ಹೋಗಬೇಡ ಹರಿಯೇ ॥ ॥ ಪಲ್ಲ ॥ ಪೋಗುವಿ ನೀ ಪುನರಾಗಮವೆಂದಿಗೆ । ಹೇಗೆ ತಾಳುವೆವೊ । ನಾಗಮರ್ದನ ಕೃಷ್ಣ ॥ ಅನುಪಲ್ಲ ॥ ಬಾಲತನದಿ ಬಹು ಲೀಲೆಗಳಿಂದ ಗೋಪಾಲರನೊಡಗೂಡಿ । ಬಾಳ ಪ್ರೇಮದಿ ನಮ್ಮಾಲಯದೊಳ ಪೊಕ್ಕು ಪಾಲು ಬೆಣ್ಣೆಯ ಬೇಡಿ ॥ ಶೀಲಮೂರುತಿ ನಿನ್ನೊಲುಮೆಗೆ ಶಿಲುಕಿದ । ಬಾಲೆಯರಾ ಸ್ಮರನಂಬಿಗೆ ಗುರಿಮಾಡಿ ॥ ೧ ॥ ಹುಟ್ಟಿದ್ದು ಮಧುರೆ ತಂದಿಟ್ಟದ್ದು ಗೋಕುಲಕೆ ಪಟ್ಟದರಸು ಎನಿಸಿ । ಬೆಟ್ಟಲಿ ಬೆಟ್ಟವನೆತ್ತಿ ಹೊರಟು ಬಂದ ಕಷ್ಟವ ಪರಿಹರಿಸಿ ॥ ಕೃಷ್ಣಮೂರುತಿ ಪರಮೇಷ್ಠಿಗಳರಸೆ ನಮ್ಮಿಷ್ಟದೇವನೆ ಈಗ ಬಿಟ್ಟು ಹೋಗದಿರೋ ॥ ೨ ॥ ಮಾರಮಣನೆ ಕರು

ಕಾಕರನೆಂಬುದು ತೋರಲಿಲ್ಲವೊ ನಮಗೆ । ಸೇರಿದವರ ಮೊರೆ ಲಾಲಿಸ ದಿದ್ದೊಡೆ ಯಾರಿಲ್ಲೊ ಗತಿ ನಮಗೆ ॥ ಮಾರಜನಕ ಗುರುಪುರಂದರವಿಠಲ । ಗಾರು ಮಾಡದೆ ನಮ್ಮ ಸೇರಿ ಸುಖಿಸುತಿರು ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೧೩೧. ರಾಗ ಕಲ್ಯಾಣಿ, ಅಟತಾಳ.

ನಾರಾಯಣ ಎನ್ನಿರೋ । ಶ್ರೀನರಹರಿ । ನಾರಾಯಣ ಎನ್ನಿರೋ ॥ ॥ ಪಲ್ಲ ॥ ನಾರಾಯಣ ಎಂದು ಅಜಮಿಳ ಕೈವಲ್ಯ । ಸೇರಿದನೆಂಬುದು ಕೇಳಿ ಅರಿಯಿರೋ ॥ ಅನುಪಲ್ಲ ॥ ಕಾಶಿಗೆ ಹೋಗಲೇಕೆ । ಕಾವಡಿ ಹೊತ್ತು । ಬೇಸತ್ತು ತಿರುಗಲೇಕೆ ॥ ವಾಸುದೇವನ ನಾಮ ಬಿಡದೆ ನೆನೆದರೆ । ಕ್ಲೇಶಗಳೆಂಬವು ಲೇಶಮಾತ್ರವಿಲ್ಲ ॥ ೧ ॥ ಚೋರರ ಭಯ ವಿಲ್ಲವೊ । ಇದಕೆ ನೋಡು । ದಾರಿ ಅಂಜಿಕೆ ಇಲ್ಲವೊ ॥ ಊರನಾಳುವ ಧೊರೆ ಭೀತಿ ಬಾಧೆಗಳಿಲ್ಲ । ಘೋರ ಪಾತಕವೆಲ್ಲ ಹೀರಿ ಬಿಡುವುದಕ್ಕೆ ॥ ॥ ೨ ॥ ಸ್ನಾನವ ಮಾಡಲೇಕೆ । ಮಾನವರಿಗೆ । ಮೌನ ಮಂತ್ರವೇತಕೆ ॥ ದೀನಪಾಲಕನ ಬಿಡದೆ ನೆನೆದರೆ । ಧ್ಯಾನಕ್ಕೆ ಸರಿಯುಂಟೆ ಪುರಂದರ ವಿಠಲಾ ॥ ೩ ॥ ಶ್ರೀಃ ॥

೧೩೨. ರಾಗ ಕಮಾಚ್, ಆದಿತಾಳ.

ಹೇಗೆ ಮಾಡಬೇಕೋ । ವಿಠಲ ತಂದೆ । ಹೇಗೆ ಮಾಡಬೇಕೋ ॥ ॥ ಪಲ್ಲ ॥ ಹೇಗಾದರು ದುರಿತಗಳೆನ್ನ ಕಾಡದ । ಹಾಗೆ ಮಾಡಬೇಕೋ ॥ ॥ ಅನುಪಲ್ಲ ॥ ಇಂದಿನ ನರಜನ್ಮವೋ । ನಿನ್ನ ಕೃಪೆ । ಯಿಂದ ದೊರ ಕಿತಲ್ಲೊ ॥ ಮುಂದೆನ್ನ ತಾಯ ಗರ್ಭದಿಂದ ಜನಿಸದ । ಹಾಗೆ ಮಾಡ ಬೇಕೊ ವಿಠಲ ತಂದೆ ॥ ೧ ॥ ನಿನ್ನನು ಬೇಡುವದೆ । ದುಷ್ಕರ್ಮದ । ಹಾನಿ ಒಂದೆ ಸಾಲದೆ ॥ ಹೀನ ಮಾನವರಿಗೆ ನಾ ಕೈ ಜೋಡಿಸ । ಧಾಂಗೆ ಮಾಡಬೇಕೊ ವಿಠಲ ತಂದೆ ॥ ೨ ॥ ಕರುಣಿಸೊ ಪುರಂದರ ವಿಠಲ ತಂದೆ । ಮರೆ ಹೊಕ್ಕೆನೊ ಪೊರಾ ॥ ಶರಣಾಗತವತ್ಸಲನೆಂಬೊ ಬಿರಿದುಳ್ಳ । ಹಾಂಗೆ ಮಾಡಬೇಕೋ ವಿಠಲ ತಂದೆ ॥ ೩ ॥ ಶ್ರೀಃ ॥

## ೧೩೩. ರಾಗ ಧನಾಸಿ, ಆದಿತಾಳ.

ಕಾವ ದೇವ ನೀನಲ್ಲದೆ ಜಗಕಿನ್ಯಾವ ದೇವರುಂಟು ॥ ದೇವಾಧಿದೇವ ನೀನೆಂದು ನಂಬಿದೆ ಕಾಯೊ ಕನಕಾಚಲಗೋಪಾಲಾ ॥ ಪಲ್ಲ ॥ ನಖದಲಿ ಹಿರಣ್ಯಕನಸುವನೆ ಶೀಳಿ । ರಕುತವ ದೆಸೆದೆಸೆಗೆ ಚೆಲ್ಲಲೂ ॥ ಸಕಲ ಸುರರು ಕೊಂಡಾಡಲು ಜಯವೆಂದು । ಭಕತ ಪ್ರಹ್ಲಾದನನು ಕರುಣದಿ ॥ ೧ ॥ ತಂದೆ ತೊಡೆಯ ಮೇಲ್ಕುಳ್ಳಿಂದು ಕಾಳ್ಕಿರಲು । ಕಂದನ ಮಲತಾಯಿ ನೂಕಲು ॥ ಅಂದು ಶಿಶುವು ಅಡವಿಗೆ ನಡೆತರಲು । ಬಂದು ನೀ ಕಾಯ್ದಿಯೊ ಕರುಣದಿ ॥ ೨ ॥ ಅತಿ ಚಪಲದಿ ದುಶ್ಯಾಸನ ಸಭೆಯೊಳು । ಖತಿಯಿಂದಲಿ ಶೆಳೆಯೆ ಶೀರೆಯ ॥ ಸತಿಯರೊಳಗೆ ಅತಿ ಚೆಲುವೆ ದ್ರೌಪದಿ । ಖತಿಗೊಂಡಿರೆ ಕಾಯ್ದಿಯೊ ಕರುಣದಿ ॥ ೩ ॥ ಶಕಟ ಪೂತನೆ ಧೇನುಕ ವತ್ಸಾಸುರ । ಮಿಕ್ಕ ಮುಖ್ಯರನೆಲ್ಲ ಸವರಿದೇ ॥ ಪ್ರಕಟಿತನದಿ ಕಂಸನ ನೆಲಕೊತ್ತಿ ದೇ । ವಕಿ ವಸುದೇವರ ನೀನು ಕರುಣದಿ ॥ ೪ ॥ ಮರಣ ಕಾಲದೀ ಅಜಮಿಳ ತಾನು । ಮರುಳದಿ ಮಗ ನಾರಗನೊದರೇ ॥ ನೆರದು ಪೊರದೆ ನೀ ಕರುಣಿಗಳರಸನೆ । ಗುರು ಪುರಂದರವಿಠಲಾ ಕರುಣದಿ ॥ ೫ ॥ ಶ್ರೀಃ ॥

## ೧೩೪. ರಾಗ ಹಿಂದುಸ್ಥಾನಿ ಕಾಪಿ, ಆದಿತಾಳ.

ನಗುವರಲ್ಲೋ ರಂಗಯ್ಯ ನಿನ್ನಾಟವ ಕಂಡೂ । ಹಗರಣವಾಗಿದೆ ಎನಗೆ ನಿಗಮ ಗೋಚರನೇ ॥ ಪಲ್ಲ ॥ ನಿಗಮವನ್ನು ತರಲು ಮತ್ಸ್ಯಾಕೃತಿಯ ತಾಳಿದೀ । ನಗವನೆತ್ತಿ ಕೂರ್ಮನೆಂಭ ಪೆಸರ ಧರಿಸಿದೀ ॥ ಜಗತಿಯನ್ನು ತರಲು ವರಹಮೂರ್ತಿಯೆನಿಸಿದೀ । ಮಗುವಿಗಾಗಿ ಘೋರಾಕೃತಿ ನರಹರಿಯೆನಿಸಿದೀ ॥ ೧ ॥ ಹೆಡೆಮುಡಿ ಕಟ್ಟಿ ದಾನವ ಕೊಟ್ಟ ಬಲಿಯ ಭಂಗಿಸಿದೀ । ಪಡೆದ ತಾಯ ಶಿರವ ಕಡಿದು ನ್ಯಾಯವೆನಿಸಿದೀ ॥ ಮಡದಿಗಾಗಿ ಮರ್ಕಟರ ಹಿಂಡ ಕೂಡಿಸಿದೀ । ಕಡಲ ಕಟ್ಟಿ ಕಪಿಗಳಿಂದ ಧುರವ ಜೈಸಿದೀ ॥ ೨ ॥ ಅಷ್ಟಮಿಯೊಳರ್ಧರಾತ್ರಿ ವೇಳೆ ಜನಿಸಿದೀ । ದುಷ್ಟ ಕಂಸನು ಹಾಕಿದ ಸೆರೆಯ ಬಾಗಿಲ ತೆಗಿಸಿದೀ ॥

ಥಟ್ಟನೆ ಗೋಕುಲದಲ್ಲಿ ಬಂದು ನೆಲಸಿದೀ । ಸೃಷ್ಟಿಸಿ ಚಂಡಿಕೆಯ ಖಳನ ಮುಂದೆ ನಿಲಿಸಿದೀ ॥ ೩ ॥ ನಂದಗೋಪ ತನಗೆ ಕಂದನಾದನು ಎಂದೂ ಕಾ । ಳಿಂದಿಯೊಳಗೆ ಸ್ನಾನವ ಮಾಡಿ ಮಂದಿರಕೆ ಬಂದೂ ॥ ಚಂದದಿಂದ ಜಾತಕರ್ಮ ಮಾಡಿಸಿಕೊಂಡು ॥ ಬಂದ ಬ್ರಾಹ್ಮಣರಿಗೆ ದಕ್ಷಿಣೆ ಕೊಟ್ಟನು ಅಂದು ॥ ೪ ॥ ಬಣ್ಣಿಸಿ ಮಕ್ಕಳ ಕರೆದು ಬೆಣ್ಣೆಯುಣಿಸಿದಿ । ಚಿಣ್ಣಿಕೋಲು ಬೊಗರಿ ಚೆಂಡು ಗಜಿಗನಾಡಿದಿ ॥ ಕಣ್ಣಸನ್ನೆ ಮಾಡಿ ಅವರ ಕಾಕುಮಾಡಿದಿ । ಮಣ್ಣತಿಂದು ಬಾಯೊಳು ಬ್ರಹ್ಮಾಂಡ ತೋರಿದಿ ॥ ೫ ॥ ಗೊಲ್ಲರ ಮನೆಗೆ ನೀನು ಮೆಲ್ಲನೆ ಪೋಗಿ । ಚೆಲ್ಲಿ ಪಾಲು ಮೊಸರು ಬೆಣ್ಣೆ ಸೂರೆಮಾಡಿದಿ ॥ ವಲ್ಲಭೆಯರ ಕೂಡೆ ನೀನು ಸರಸವಾಡಿದಿ । ಮುಲ್ಲೆ ಮಲ್ಲಿಗೆ ಅರಳ ಮುಡಿಗೆ ಮುಡಿಸಿದಿ ॥ ೬ ॥ ಬಾಲರ ಕೂಡೆ ಮೊಸರ ಭಾಂಡ ಒಡಿಸಿದಿ । ಹಾಲು ಮೊಸರು ಬೆಣ್ಣೆ ಕದ್ದು ಕಳ್ಳನೆನಿಸಿದಿ ॥ ಬಾಲೆಯರ ವಸ್ತ್ರವ ಕೊಂಡು ಮರವನೇರಿದೀ। ಕಾಳಾಹಿವೇಣಿಯರೊಡಗೂಡಿ ರಮಿಸಿದಿ ॥ ೭ ॥ ತುರುಗಳ ಹಿಂಡನು ನಡಿಸಿ ವನವ ಚರಿಸಿದೀ । ತರುಣಿ ಮುದುಕಿ ಕುಬುಜೆಯನ್ನಾದರಿಸಿ ಕೂಡಿದೀ ॥ ಕರುಣ ಇಷ್ಟೊಂದಿಲ್ಲದೆ ಸೋದರ ಮಾವನ ಕೆಡಹಿದೀ । ನರನ ರಥದ ಬೋವನಾಗಿ ಕುದುರೆ ನಡಿಸಿದೀ ॥ ೮ ॥ ತರುಣಿಯರ ವ್ರತವ ಕೆಡಿಸಿ ಬತ್ತಲೆ ನೆಲಸಿದೀ । ತುರಗವೇರಿ ಕಲ್ಕಿಯಾಗಿ ಖಡ್ಗ ಧರಿಸಿದೀ ॥ ಗುರು ಮಧ್ವರಾಯರಿಗೊಲಿದು ಉಡುಪಿಲಿ ನೆಲಸಿದೀ । ವರದ ಪುರಂದರವಿಠಲನೆ ನಮಗೆ ಗತಿಯಾದೀ ॥ ೯ ॥ ಶ್ರೀಃ ॥

## ೧೩೫. ಶ್ರೀರಾಗ, ಅಟತಾಳ.

ವೃಂದಾವನದೊಳಾಡುವನಾರೆ । ಅಕ್ಕ । ಚಂದಿರವದನೆ ನೋಡೋಣ ಬಾರೆ ॥ ಪಲ್ಲ ॥ ಅರುಣಪಲ್ಲವ ಪಾದಯುಗಳನೂ । ದೇವ । ಮರಕತ ಮಂಜುಳಾಭರಣನೂ ॥ ತುರುವಾರ ಯದುವರರಾಯನೇ । ಎಂಥ । ಪರಿಪೂರ್ಣಕಾಮ ನಿಸ್ಸೀಮನೇ ॥ ೧ ॥ ಹಾರಹೀರಗುಣಾಧಾರನೇ । ರಂಗ । ಸಾರಶರೀರಶೃಂಗಾರನೇ ॥ ಆರಿಗಾದರು ಮನದೋರನೆ ।

ರಂಗ । ಸೇರಿದವರ ಮಾತು ವಿಚಾರನೆ ॥ ೨ ॥ ಮಕರಕುಂಡಲ ಕಾಂತಿ ಭರಿತನೆ । ದಿವ್ಯ । ಅಕಳಂಕರೂಪಲಾವಣ್ಯನೆ ॥ ಸಕಲರೊಳಗೆ ಈತ ದೇವನೇ । ರಂಗ । ಸತತ ಪುರಂದರವಿಠಲನೆ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೧೩೬. ರಾಗ ಸಾಟಿ ಕೊರವಂಜಿ, ಆದಿತಾಳ.

ಯಾರಿ ರಂಗನ ಯಾರಿ ಕೃಷ್ಣನ । ಯಾರಿ ರಂಗನ ಕರೆಯಬಂದವನು । ಯಾರಿ ರಂಗನ ॥ ಪಲ್ಲ ॥ ಗೋಪಾಲಕೃಷ್ಣನ । ಪಾಪವಿನಾಶನ ॥ ಈಪರಿಯಿಂದಲಿ । ಕರೆಯಬಂದವನು ॥ ೧ ॥ ವೇಣುವಿನೋದನ । ಪ್ರಾಣಪ್ರಿಯನ ॥ ಜಾಣೆಯುರರಸನ । ಕರೆಯಬಂದವನು ॥ ೨ ॥ ಕರಿರಾಜವರದನ । ಪರಮಪುರುಷನ ॥ ಪುರಂದರವಿಠಲನ । ಕರೆಯಬಂದವನು ॥ ೩ ॥

೧೩೭. ರಾಗ ಪೀಲು, ಆದಿತಾಳ.

ನಾರಾಯಣ ಗೋವಿಂದ । ಜಯಜಯ । ಪರತರ ಪರಮಾನಂದ ॥ ॥ ಪಲ್ಲ ॥ ನಕ್ತಂಚರಹರ ನವ್ಯಗುಣಾಕರ ॥ ನಾರದಗಾನವಿಲೋಲ ॥ ೧ ॥ ತ್ರಿಪುರಸಂಹಾರಕ ವಿಪರೀತರೂಪ ॥ ವಿಪುಲಕಲ್ಕ್ಯವತಾರ ॥ ೨ ॥ ದಾಸದಾಸ ಸಿರಿಪುರಂದರವಿಠಲ ॥ ಶೇಷಶಯನ ಸರ್ವೇಶ ॥ ೩ ॥ ಶ್ರೀಃ ॥

೧೩೮. ರಾಗ ಶಂಕರಾಭರಣ, ಅಟತಾಳ.

ತೂಗಿರೆ ರಂಗನ ತೂಗಿರೆ ಕೃಷ್ಣನ । ತೂಗಿರೆ ಅಚ್ಯುತಾನಂತನಾ ॥ ತೂಗಿರೆ ವರಗಿರಿಯಪ್ಪ ತಿಮ್ಮಪ್ಪನ । ತೂಗಿರೆ ಕಾವೇರಿ ರಂಗನ ॥ ಪಲ್ಲ ॥ ನಾಗಲೋಕದಲ್ಲಿ ನಾರಾಯಣ ಮಲಗಿಹ । ಪೋಗುತಲೊಮ್ಮೆ ತೊಟ್ಟಿಲ ತೂಗಿರಿ ॥ ಪೋಗುತಲೊಮ್ಮೆ ನಿಮ್ಮ ಬಾಲ ರಾಘವ ಬಹು । ಭಾಗ್ಯವಂತನೆಂದು ತೂಗಿರೆ ॥ ೧ ॥ ಇಂದ್ರಲೋಕದಲ್ಲಿ ಸುಂದರ ಮಲಗಿಹ । ಬಂದೊಮ್ಮೆ ತೊಟ್ಟಿಲ ತೂಗಿರೆ ॥ ಬಂದೊಮ್ಮೆ ತೊಟ್ಟಿಲ ತೂಗಿರೆ ಶ್ರೀಗೋ । ವಿಂದನ ತೊಟ್ಟಿಲ ತೂಗಿರೆ ॥ ೨ ॥ ಹುಲಿಯುಗುರರಳೋಲಿ

ಕೊರಳ ಪದಕ ಹಾರ । ತರಳನ ತೊಟ್ಟಿಲ ತೂಗಿರೆ ॥ ತರಳನ ತೊಟ್ಟಿಲ ತೂಗಿರೆ ಶ್ರೀ । ಪುರಂದರವಿಠಲನ ತೂಗಿರೆ ॥ ೩ ॥ ಶ್ರೀಃ ॥

೧೪೯. ರಾಗ ಕಲ್ಯಾಣಿ, ಅಟತಾಳ.

ದಾರಿ ಯಾವುದಯ್ಯಾ । ವೈಕುಂಠಕ್ಕೆ । ಹಾದಿ ತೋರಿಸಯ್ಯ ॥ ॥ ಪಲ್ಲ ॥ ಪಾಪವ ಪೂರ್ವದಲಿ ನಾ । ಮಾಡಿದಕೆ । ಲೇಪವಾಗಿರಲು ಕರ್ಮ ॥ ಈಪರಿಯಿಂದಲಿ ಪೂಜಿಪೆ ನಿನ್ನನು । ಶ್ರೀಪತಿ ಸಲಹಯ್ಯ ಭೂಪ ನಾರಾಯಣ ॥ ೧ ॥ ಬಲು ಬಲು ಅನುಭೋಗಿಸಿ । ಕತ್ತಲೆಯೊಳು । ಬಲು ಅಂಜಿದೆವು ನಡುಗಿ ॥ ಚಲಿಸುತ್ತ ಬಳಲಿದೆ ದಾರಿಯು ಕಾಣದೆ । ಬಲುಕೋಟಿ ತೇಜದಿ ಹೊಳೆವಂಥ ದಾರಿಯು ॥ ೨ ॥ ಇನ್ನು ನಾ ಜನಿಸದಂತೆ । ಭೂಮಿಯ ಮೇಲೆ । ನಿನ್ನ ದಾಸನಾದೆನೊ ॥ ಪನ್ನಂಗಶಯನ ಶ್ರೀಪುರಂದರವಿಠಲ । ಇನ್ನು ಸೃಷ್ಟಿಸದಿರೊ ಮನ್ನಿಸೀ ಪ್ರಾರ್ಥನೇ ॥ ೩ ॥ ಶ್ರೀಃ ॥

೧೫೦. ರಾಗ ಮಧ್ಯಮಾವತಿ, ಅಟತಾಳ.

ಬಂದು ನಿಂದಿಹ ನೋಡಿ । ಭೂತಳದಿ ವೆಂಕಟ । ಇಂದಿರೆಯೊಡಗೂಡಿ । ಒಪ್ಪುವ ನಿರಂತರ ॥ ಪೊಂದಿ ಭಜನೆಯ ಮಾಡಿ ಆನಂದ ಬೇಡಿ ॥ ವಂದಿಸುತ ಮನದೊಳಗೆ ಇವನಡಿ ದ್ವಂದ್ವ ಭಜಸಲು ಬಂದ ಭಯಹರ ಇಂದುಧರ ಸುರವೃಂದನುತ ಗೋವಿಂದ ಘನ ದಯಾಸಿಂಧು ಶ್ರೀಹರಿ ॥ ಪಲ್ಲ ॥ ದ್ವಾರದೆಡಬಲದಲ್ಲಿ । ಜಯ ವಿಜಯರಿಬ್ಬರು । ಸೇರಿ ಸೇವಿಪರಲ್ಲೀ । ಸನಕಾದಿನುತ ಶ್ರೀಂ । ಗಾರನಿಧಿಯಂಗುಲೀ । ಮುತ್ತಿನಲಿ ಶೋಭಿಪ । ಹಾರ ಪೊಂದಿಪ್ಪವಲ್ಲೀ । ವಿಸ್ತಾರದಲ್ಲಿ ॥ ವಾರವಾರಕೆ ಪೂಜೆ ಗೊಂಬುವ ಹಾರ ಮಕುಟಾಭರಣ ಕುಂಡಲ । ಧಾರ ಭುಜಕೇಯೂರಭೂಷಿತ ಮಾರಪಿತ ಗುಣ ಮೋಹನಾಂಗ ॥ ಚಾರುಪೀತಾಂಬರ ಕಟೀಕರವೀರ ಕಲ್ಹಾರಾದಿ ಹೂವಿನ । ಹಾರ ಕೊರಳೊಳು ಎಸೆಯುತಿರೆ ವದ । ನಾರವಿಂದವು ನಗುತ ನಲಿ

ವುತ ॥ ೧ ॥ ಎಲ್ಲಾ ಭಕ್ತರಭೀಷ್ಟಾ ಬೇಡುವರಿಗೆ ಕೈ । ವಲ್ಯ ಸ್ಥಾನವ ನಿಟ್ಟ । ಶೇಷಾದ್ರಿ ಮಂದಿರ । ದಲ್ಲಿ ಲೋಲಿಪ ಧಿಟ್ಟ । ಸೌಭಾಗ್ಯ ವಿಧಿಗೆದು । ರಿಲ್ಲ ಭುಜಬಲ ಪುಷ್ಟಾ । ಕಸ್ತೂರಿಯಿಟ್ಟಾ ॥ ಚೆಲ್ವಶಿರದಲಿ ಶೋಭಿಸುವ ಸಿರಿ ವಲ್ಲಭನ ಗುಣ ಪೊಗಳುತಿಹ ಜಗ । ವೆಲ್ಲರಿದಲ್ಲಣ ಪರಾಕ್ರಮ ಮಲ್ಲಮರ್ದನ ಮಾತುಳಾಂತಕ ॥ ಫಲ್ಗುಣನ ಸಖ ಪ್ರಕಟನಾಗಿಹ ದುರ್ಲಭನು ಅಘದೂರ ಬಹು ಮಾಂ । ಗಲ್ಯವಹನಿವನುದ್ಯತಾಕ್ಷಿಗೆ ಉಲ್ಲಾಸ ಕೊಡುತಲಿ ಚಂದದಿಂದಲಿ ॥ ೨ ॥ ಪದಕ ಕೌಸ್ತುಭ ತೋರ । ಸರಿಗೆಯು ಕಂಥ । ರದಿ ಸುದರುಶನಾಧಾರ । ಶೋಭಿಪ ವ್ಯದು । ಪದಯುಗಳ ನೂಪುರನಿಟ್ಟಿಹ ಮುನಿ । ಹೃದಯಸ್ಥಿತ ಗಂಭೀರಾ । ಬಲು ದಾನಶೂರಾ ॥ ವಿಧಿಭವಾದ್ಯರ ಪೊರೆವ ದಾತನು । ತುದಿಮೊದಲು ಮಧ್ಯಮರಹಿತನು । ಉದುಭವಾದಿಗಳಿಗೆ ಸುಕರ್ತನು ತ್ರಿದಶಪೂಜಿತ ತ್ರಿಭುವನೇಶ ॥ ಸದುವಿಲಾಸದಿ ಸ್ವಾಮಿ ತೀರ್ಥದಿ ಉದಿಸುತಿರೆ ಸಿರಿ ಮಹಿಮೆ ಸಹಿತದಿ । ಪದುಮನಾಭ ಪುರಂದರವಿಠಲನ ಪ್ರತಿವರುಷದುತ್ಸವದಿ ಮೆರೆಯುತ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೪೧. ರಾಗ ಪೂರ್ವಿ, ಅಟತಾಳ.

ಅಪಮಾನವಾದರೆ ಒಳ್ಳಿತು । ಅಪರೂಪ ಹರಿನಾಮ ಜಪಿಸುವ ಮನುಜಗೆ ॥ ಪಲ್ಲ ॥ ಮಾನದಿಂದ ಅಭಿಮಾನ ಪುಟ್ಟುವದು । ಮಾನದಿಂದ ತಪ ಹಾನಿಯಾಗುವದು ॥ ಮಾನಿ ದುರ್ಯೋಧನಗೆ ಹಾನಿಯಾಯಿತು ಅನು । ಮಾನವಿಲ್ಲ ಮಾನಾವಮಾನಸಮನಿಗೆ ॥ ೧ ॥ ಅಪಮಾನದಿಂದಲಿ ತಪ ವೃದ್ಧಿಯಾಗುವದು । ಅಪಮಾನದಿಂದ ಪುಣ್ಯ ಸಫಲವಾಗುವದು ॥ ಅಪಮಾನದಿಂದಲಿ ನೃಪ ಧ್ರುವರಾಯಗೆ । ಕಪಟನಾಟಕ ಕೃಷ್ಣ ಅಪರೋಕ್ಷನಾದನು ॥ ೨ ॥ ನಾನೇನು ಮಾಡಲಿ ಯಾರಲ್ಲಿ ಪೋಗಲಿ । ಕಾನನಚರರಾರಾಧ್ಯ ನೀನಿರಲೂ ॥ ದೀನರಕ್ಷಕ ನಮ್ಮ ಪುರಂದರವಿಠಲ । ಏನು ಬೇಡೆನಗಪಮಾನವೇ ಇರಲಿ ॥ ೩ ॥ ಶ್ರೀಃ ॥

## ೧೪೨. ರಾಗ ಕಲ್ಯಾಣಿ, ಅಟತಾಳ.

ಗೆದ್ದೆಯೊ ಹನುಮಂತ । ಅಸುರರ । ಒದ್ದ್ಯೋ ನೀ ಬಲವಂತ ॥ ॥ ಪಲ್ಲ ॥ ಬದ್ಧಾಂಜಲಿಯಿಂದ ರಘುಪತಿ ಪಾದವ । ಹೃದ್ಯದಿ ಭಜನೆ ಮಾಡುವ ಬುದ್ಧಿವಂತ ॥ ಅನುಪಲ್ಲ ॥ ಅಂಜನೆಸುತನೀತಾ । ಲಂಕಾ ಪುರದಿ । ಅಕ್ಷಯನ ಕೊಂದಾತ ॥ ಕಂಜಾಕ್ಷಿ ಸೀತೆಯ ಕಂಡು ಮುದ್ರಿಕೆ ಯಿತ್ತು । ಮಂಜುಳ ವಾರ್ತೆಯು ತಂದ ರಾಮನ ದೂತಾ ॥ ೧ ॥ ಈರೇಳು ಜಗದೊಳಗೆ । ಇನ್ನು ಮತ್ತೆ । ಯಾರು ಸರಿ ನಿನಗೆ ॥ ವೀರ ಮಹಾಬಲ ಶೂರ ಪರಾಕ್ರಮ । ಧೀರ ಸವಿಾರ ಉದಾರ ಗಂಭೀರಾ ॥ ೨ ॥ ವಾಂಛಿತ ಫಲವೀವಾ । ನಾದಾ ಮುಖ್ಯ । ಪ್ರಾಣ ಮಹಾನುಭಾವ ॥ ಕಿಂಚಿತ್ಕೃಷ್ಣವ ಪಡಲೀಸ ಭಕ್ತರ್ಗೆ । ಪಾಂಚಜನ್ಯ ಧರ ಪುರಂದರವಿಠಲ ದಾಸಾ ॥ ೩ ॥ ಶ್ರೀಃ ॥

## ೧೪೩. ರಾಗ ಅಹೇರಿ, ಆದಿತಾಳ.

ಸುಮ್ಮನೆ ದೊರೆಕುವದೇ । ಶ್ರೀ । ರಾಮನ ದಿವ್ಯ ನಾಮವೂ ॥ ಶ್ರೀ ಕೃಷ್ಣನ ದಿವ್ಯನಾಮವೂ । ಜನ್ಮ ಜನ್ಮಾಂತರದಾ ದುಷ್ಕರ್ಮ ಹೋದವ ಗಲ್ಲದೆ ॥ ಪಲ್ಲ ॥ ಕಂತುಪಿತನ ದಿವ್ಯಮೂರ್ತಿಯು ಅಂತರಂಗದಲ್ಲಿಟ್ಟು ॥ ಚಿಂತೆಯೆ ಲ್ಲ ಬಿಟ್ಟು ನಿಶ್ಚಿಂತನಾದವಗಲ್ಲದೆ ॥ ೧ ॥ ಭಕ್ತಿರಸದಲ್ಲಿ ತನ್ನ ಚಿತ್ತವಶ್ಯವಾಗಿ ॥ ಅಚ್ಯುತನ್ನ ನಾಮವೂ ಬಚ್ಚಿಟ್ಟು ಕೊಂಡವಗಲ್ಲದೆ ॥ ॥ ೨ ॥ ಕಣ್ಣೊಳಗಿದ್ದ ಮೂರುತಿಯು ತನ್ನೊಳಗೆ ತಂದು ॥ ಅನ್ನಪೂರ್ಣ ಪುರಂದರವಿಠಲನ ಕೊಂಡಾಡದೆ ॥ ೩ ॥ ಶ್ರೀಃ ॥

## ೧೪೪. ರಾಗ ಶಂಕರಾಭರಣ, ತ್ರಿಪುಟತಾಳ.

ಎನಗೂ ಆಣೆ ಕೃಷ್ಣ ನಿನಗೂ ಆಣೆ । ಎನಗೂ ನಿನಗೂ ಇಬ್ಬರಿಗೂ ನಿನ್ನ ಭಕ್ತರಾಣೆ ॥ ಪಲ್ಲ ॥ ಹರಿ ನಿನ್ನ ಸ್ಮರಣೆಯು ಮಾಡದಿದ್ದರೆ ಎನಗೆ ಆಣೆ ॥ ಹರಿ ನೀ ಯೆನ್ನ ಕರುಣಿಸದಿದ್ದರೆ ನಿನಗೆ ಆಣೆ ॥ ೧ ॥ ನಿನ್ನ ಬಿಟ್ಟು ಅನ್ಯರ ಭಜಿಸಿದರೆನಗೆ ಆಣೆ ॥ ನನ್ನ ನೀ ಕೈಬಿಟ್ಟು ಪೋದರೆ

ನಿನಗೆ ಆಣೆ ॥ ೨ ॥ ತನುಮನ ಧನ ವಂಚಿತನಾದರೆ ಎನಗೆ ಆಣೆ ॥ ಎನ್ನ । ಮನಸು ನಿನ್ನಲ್ಲಿ ನಿಲ್ಲಿಸದಿದ್ದರೆ ನಿನಗೆ ಆಣೆ ॥ ೩ ॥ ಕಾಕು ಮನು ಜರ ಸಂಗವ ಮಾಡಿದರೆನಗೆ ಆಣೆ । ಎನ್ನ ॥ ಲೌಕಿಕವ ಬಿಡಿಸದಿದ್ದರೆ ನಿನಗೆ ಆಣೆ ॥ ೪ ॥ ನಿಷ್ಠುರ ಸಂಗವ ಮಾಡದಿದ್ದರೆ ಎನಗೆ ಆಣೆ ॥ ದುಷ್ಟ ಸಂಗವ ಬಿಡಿಸದಿದ್ದರೆ ನಿನಗೆ ಆಣೆ ॥ ೫ ॥ ಹರಿ ನಿನ್ನಾಶ್ರಯ ಮಾಡದಿ ದ್ದರೆ ಎನಗೆ ಆಣೆ ॥ ಪುರಂದರವಿಠಲನೆ ಉದ್ಧರಿಸದಿದ್ದರೆ ನಿನಗೆ ಆಣೆ ॥ ೬ ॥

## ೧೪೫. ರಾಗ ಬಿಲಾರಿ, ಅಟತಾಳ.

ಹಣ್ಣು ಬಂದಿದೆ ಕೊಳ್ಳಿರೊ ನೀವೀಗ । ಚಿನ್ನ ಬಾಲಕೃಷ್ಣನೆಂಬೊ ಕನ್ನೆಬಾಳೆ ॥ ಪಲ್ಲ ॥ ಹವ್ಯಕವ್ಯದ ಹಣ್ಣು ಸವಿವ ಸಕ್ಕರೆ ಹಣ್ಣು । ಭವ ರೋಗಗಳನೆಲ್ಲ ಕಳೆವ ಹಣ್ಣು ॥ ನವನೀತ ಚೋರನೆಂಬೊ ಜವನ ಅಂಜಿಪ ಹಣ್ಣು । ಅವನಿಯೊಳು ಶ್ರೀರಾಮನೆಂಬೊ ಹಣ್ಣು ॥ ೧ ॥ ಕೊಳೆತು ಹೋಗುವದಲ್ಲ ಹುಳುತು ಹೋಗುವದಲ್ಲ । ಕಳೆದು ಬಿಸಾಡಿ ಸಿಕೊಳುವದಲ್ಲ ॥ ಅಳತೆಕೊಂಬುವದಲ್ಲ ಗಿಳಿಕಚ್ಚಿ ತಿಂಬೊದಲ್ಲ । ಒಳಿ ತಾದ ಹರಿ ಎಂಬೊ ಮಾವಿನಹಣ್ಣು ॥ ೨ ॥ ಕೆಟ್ಟು ನಾರುವದಲ್ಲ ಬಿತ್ತಿ ಬೆಳೆಯೊದಲ್ಲ । ಕಷ್ಟದಿ ಹಣಕೊಟ್ಟು ಕೊಂಬುದಲ್ಲ । ಸೃಷ್ಟಿಯೊಳಗೆ ನಮ್ಮ ಪುರಂದರವಿಟ್ಠಲ । ಕೃಷ್ಣರಾಯನೆಂಬೊ ಶ್ರೇಷ್ಠಾದ ಹಣ್ಣು ॥ ೩ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೪೬. ರಾಗ ಕಾಂಬೋಧಿ, ಝಾಪುತಾಳ.

ಪತಿಭಕುತಿ ಇಲ್ಲದಿಹ ಸತಿಯ ಸಂಗಾ । ವ್ರತಗೆಟ್ಟು ಸುಖ ಪಡೆಯ ಲಿಲ್ಲವೊ ರಂಗಾ ॥ ಪಲ್ಲ ॥ ಗಂಡಬಂದರೆ ಯೆದ್ದು ನಿಲ್ಲದೆ ಮಂಚದ ಮೇಲೆ । ಚಂದದಲಿ ಕುಳಿತು ಮಾತಾಡುತಿಹಳಾ ॥ ಅಂದೆಲ್ಲವನು ಮಾರಿ ಕಾಡಿ ಬೇಡುವ ಸತಿಯು । ಗಂಡುತೊತ್ತಿನ ಸಂಗವಭಿಮಾನ ಭಂಗ ॥ ೧ ॥ ಒಂದು ತಂದರೆ ಮನೆಗೆ ಹತ್ತೆಂದು ಭಾವಿಸದೆ । ತಂದರೆ ಹತ್ತು ಮನೆಲೊಂದು ಮಾಡೀ ॥ ಇಂದೇನಿಲ್ಲವೊ ಯೆಂದು ಮುಖ

ಮೂರು ಕಡೆ ತಿರುವಿ । ಕೊಂಡುಹೋಗುವ ನಾರಿ ದೊಡ್ಡ ಬಕ ಮಾರೀ ॥ ೨ ॥ ಮಕ್ಕಳಿಗೆ ಕೊಡಲಿಲ್ಲ ಮರಿಗಳಿಗೆ ಇಡಲಿಲ್ಲ । ನಾಲ್ಕು ವರೆ ಬಣ್ಣ ಭಂಗಾರವಿಲ್ಲಾ ॥ ಚಿಕ್ಕವಳು ನಿನ್ನ ಕೈಪಿಡಿದು ಕೆಟ್ಟೆನೆಂಬ । ಮುಕ್ಕು ತೊತ್ತಿಯ ಸಂಗವಭಿಮಾನ ಭಂಗಾ ॥ ೩ ॥ ತಾಯಿ ಹೊರಡಿಸು ತಂದೆ ಮೊದಲೆ ದಾಯಾದ್ಯರಾ । ಮಾಯೆಯನು ಬಿಡು ನಿನಗೆ ಬೇಕಾದರೆ ॥ ನ್ಯಾಯದಲಿ ಬೇರೆ ಮನೆಯನು ಕಟ್ಟು ಎಂದೆಂಬ । ಮಾಯಗಾರ್ತಿಯ ತೊತ್ತು ಹೆಡತಲೆಯ ಮೃತ್ಯು ॥ ೪ ॥ ಅಣ್ಣ ತಮ್ಮಂದಿರಾ ಹೆಣ್ಣು ಒಡಹುಟ್ಟಿದರ । ಇನ್ನು ಬಿಡು ನಾ ನಿನಗೆ ಬೇಕಾದರೆ ॥ ಬನ್ನಣೆಯ ಮಾತಾಡಿ ಕ್ಲೇಶಬಡಿಸಳ ಬಿಡಿಸಿ । ಚನ್ನ ಶ್ರೀಪುರಂದರವಿಠಲ ದಯಮಾಡೋ ॥ ೫ ॥ ಶ್ರೀ ॥

ರಾಗ ಧನಾಸಿ, ಛಾಪುತಾಳ.

೧೪೭. ರಾಗ ಧನಾಸಿ, ಛಾಪುತಾಳ.

ಶ್ರೀಮ್ಮ ಎನ್ನ ಕೂಡ್ಯಾಡುವ ಮಕ್ಕಳು ಅಣಕಿಸುವರು ನೋಡೆ ॥ ಪಲ್ಲ ॥ ದಾರು ಪಡೆದನೆಂಬೋರೆ । ಅಮ್ಮಯ್ಯಾ । ದಾರುಪಡೆದನೆಂಬೋರೇ ॥ ಕೇರಿಯ ಬೆಣ್ಣೆಯ ಕದ್ದುತಿಂದವನೆಂದು । ನಾರಿಯರು ದೂರುತಾರೆ ಕೇಳಮ್ಮಾ ॥ ೧ ॥ ಮಾತೆ ನೀ ಅಲ್ಲವಂತೆ । ಅಮ್ಮಯ್ಯಾ । ಪಿತನು ಇಲ್ಲಿಲ್ಲವಂತೆ ॥ ಮಾತುಳನ ಬಾಧೆಗೆ ಮಧುರೆಯಿಂದಲಿ ತಂದು । ಖಿತಿಗೆ ಮಾರಿದರಂತೆ ನಿಮಗೆ ॥ ೨ ॥ ದೇವಕಿ ತಾಯಿಯಂತೇ । ಅಮ್ಮಯ್ಯಾ । ವಸುದೇವ ತಂದೆಯಂತೆ ॥ ಕಾಮಜನಕ ನಮ್ಮ ಪುರಂದರವಿಠಲನ । ಆವ ಕಾವನೆಂಬೋರೆ ಯತೋದೇ ॥ ೩ ॥ ಶ್ರೀ ॥

೧೪೮. ರಾಗ ಕೋರೆ, ಅಟತಾಳ.

ನೀರೆ ನೀ ಕರತಾರೆ । ಮಾರಸುಂದರನಾ । ಮಾರಸುಂದರ ಸುಕುಮಾರಾ ಸುಂದರನಾ ॥ ಪಲ್ಲ ॥ ಗೊಲ್ಲರ ಮನೆಯೊಳಗಿದ್ದಾ ಪಾಲ್ಗೊಸರಾ । ಮೆಲ್ಲನೆ ಮೆಲ್ಲುವ ವಲ್ಲಭ ಹರಿಯಾ ॥ ೧ ॥ ಯಾದವರಾನೆಲ್ಲ ಆದರಿಸಿದನಾ ॥ ವೇದಶಾವೇದಾಂತನ ಯಾದವಪ್ರಿಯನಾ ॥ ೨ ॥

ವರಗೌರಿಪುರದಲ್ಲಿ ವಾಸವಾಗಿಹನಾ ॥ ವರದ ಶ್ರೀಪುರಂದರವಿಠಲರಾಯನ್ನಾ ॥ ೩ ॥ ಶ್ರೀಃ ॥

೧೪೯. ರಾಗ ಪೀಲು, ಅಟತಾಳ.

ಕೊಳ್ಳಿಗಾರ ನಿನ್ನ ಕಂದಾ । ಗೋಪಿ ಗೋಪಾಲಕೃಷ್ಣ ಮುಕುಂದಾ ॥ ॥ ಪಲ್ಲ ॥ ಉಳ್ಳ ಬೆಣ್ಣೆಯನೆಲ್ಲಾ ತಿಂದಾ । ಬಹು । ಕ್ಷುಲ್ಲಕನೆಲೆ ಗೋವಿಂದಾ ॥ ಗುಲ್ಲು ಮಾಡದೆ ರಾತ್ರಿ ಬಂದಾ । ನಮ್ಮ। ಎಲ್ಲಾ ಮಾನವ ಸೂರೆಗೊಂಡಾ ॥ ಬಲು ಭಂಡಾ । ಬಲು ಭಂಡಾ । ಉದ್ದಂಡಾ। ಪ್ರಚಂಡಾ । ರುಗ್ಮಿಣಿ ಗಂಡಾ । ಅಂಡಜವಾಹನ ಪುಂಡರೀಕಾಕ್ಷನು ॥ ॥ ೧ ॥ ಚಿಕ್ಕ ಮಕ್ಕಳ ಬೆದರಿಸಿ । ಮನೆ । ಹೊಕ್ಕು ನಮ್ಮ ಹೊರಡಿಸಿ ॥ ಅಕ್ಕಾ ಹಾಲು ಗಡಿಗೆ ಇಳಿಸಿ । ಕುಡಿದು । ಸಿಕ್ಕದೆ ಓಡುವ ಸರಸಿ ॥ ಅವನು ತ್ರಾಣೆ । ಅವನು ತ್ರಾಣೆ । ನಿನ್ನಾಣೆ । ಅವರಾಣೆ । ಇವರಾಣೆ ॥ ಕಣ್ಣಾಣೆ ಕಾಣೆ ಚೋರನು ಸಿಕ್ಕ ಜಾಣೆ ॥ ೨ ॥ ಧೊರೆಯ ಮಗನಾದರೇನು । ಈ । ಧರೆಯ ತಾನಾಳಿದರೇನು ॥ ಮೊರೆಯ ಕೇಳು ಗೋಪಮ್ಮಾ। ನಿಮ್ಮ। ಮೊರೆಯ ಪೊಕ್ಕವರು ನಾವಮ್ಮಾ ॥ ಊರಿಲ್ಲಾ । ಊರಿಲ್ಲಾ । ದಿಕ್ಕಿಲ್ಲಾ । ನಾವೆಲ್ಲಾ । ನಿಲ್ಲುವರಲ್ಲಾ ॥ ಪುರಂದರವಿಠಲನ ದುಡುಕು ಒಂದೊಂದಲ್ಲಾ ॥ ೩ ॥ ಶ್ರೀಃ ॥

೧೫೦. ರಾಗ ಅಸಾವೇರಿ, ಅಟತಾಳ.

ನಾರಾಯಣ ನಿನ್ನ ನಾಮದ ಸ್ಮರಣೆಯ । ಸಾರಾಮೃತವೆನ್ನ ಬಾಯಿಗೆ ಬರಲಿ ॥ ಬಾ ರಂಗ ॥ ಪಲ್ಲ ॥ ಆಡುವಾಗ ನಲಿದಾಡುವಾಗಲಿ। ನೋಡುತ ನಿಂದು ಮಾತಾಡುವಾಗ ॥ ಕೇಡುತನದಿಂದ ಕೂಡಿ ಈ ಭವದೊಳು । ಮಾಡಿದ ಪಾಪವು ಓಡಿ ಹೋಗುವ ಹಾಗೆ ॥ ೧ ॥ ಉರಿ ಬಂದಾಗಲಿ ಛಳಿಬಂದಾಗಲಿ । ಗಡಗಡ ನಡುಗುತ್ತಿರುವಾಗಲಿ ॥ ಹರಿ ನಾರಾಯಣ ದುರಿತ ನಿವಾರಣ । ಇರುಳು ಹಗಲು ನಿನ್ನ ಸ್ಮರಣೆ ಮಾಡುವಂತೆ ॥ ೨ ॥ ಕಷ್ಟವಾಗಿರಲಿ ಉತ್ಕೃಷ್ಟವಾಗಿರಲಿ । ಇಷ್ಟಾರ್ಥಗಳಿಲ್ಲ ಕೂಡಿರಲೀ ॥ ಕೃಷ್ಣ ಕೃಷ್ಣಯೆಂಬಭೀಷ್ಟದ ನಾಮದ । ಅಷ್ಟಾ

ಕ್ಷರಿ ಮಂತ್ರ ಜಪಿಸುವ ಹಾಗೆ ॥ ೩ ॥ ಕನಸಿನೊಳಾಗಲಿ ಮನಸಿನೊಳಾಗಲಿ । ಮನಸು ಕೆಟ್ಟಿರಲಿ ಮುನಿದಿರಲಿ ॥ ಜನಕಜಾಪತಿ ನಿನ್ನ ನಾಮದ ಸ್ಮರಣೆಯು । ಮನಸಿನೊಳಗೆ ಒಮ್ಮೆ ನೆನಸುವ ಹಾಗೆ ॥ ೪ ॥ ಸಂತತ ನಿನ್ನಯ ಸಾಸಿರ ನಾಮವೆನ್ನ । ಅಂತರಂಗದೊಳಗಿರುತಿರಲೀ ॥ ಸಂತತ ವರದ ಶ್ರೀಪುರಂದರವಿಠಲ ಎ । ನ್ನಂತ್ಯಕಾಲದೊಳ್ ಒಮ್ಮೆ ನೆನಸುವ ಹಾಗೇ ॥ ೫ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೧೫೧. ರಾಗ ಸಾರಂಗ, ಝಾಪುತಾಳ.

ದೇವಕಿ ನಂದನ ಮುಕುಂದ ॥ ಪಲ್ಲ ॥ ನಿಗಮೋದ್ಧಾರ ನವನೀತ ಚೋರ ॥ ಖಗಪತಿವಾಹನ ಜಗದುದ್ಧಾರ । ೧ ॥ ಶಂಖಚಕ್ರಧರ ಶ್ರೀಗೋವಿಂದ ॥ ಪಂಕಜಲೋಚನ ಪರಮಾನಂದಾ ॥ ೨ ॥ ಮಕರ ಕುಂಡಲಧರ ಮೋಹನಾಕಾರ ॥ ರುಗ್ಮಿಣಿವಲ್ಲಭ ಪಾಂಡವಬಂಧೋ ॥ ॥ ೩ ॥ ಕಂಸಮರ್ದನ ಕೌಸ್ತುಭಹರಣ ॥ ಹಂಸವಾಹನ ಪೂಜಿತಚರಣ ॥ ೪ ॥ ವರ ವೇಲಾಪುರ ಚನ್ನ ಪ್ರಸನ್ನ । ಪುರಂದರವಿಠಲ ಸಕಲ ಗುಣಪೂರ್ಣ ॥ ೫ ॥ ಶ್ರೀಃ ॥

೧೫೨. ರಾಗ ಸುರಟಿ, ಅಟತಾಳ.

ಮನೆಯೊಳಗಾಡೋ ಗೋವಿಂದಾ । ನೀನು । ನೆರೆಮನೆಗಳಿಗೇ ಪೋಗುವದಾವ ಚಂದಾ ॥ ಪಲ್ಲ ॥ ನೊಸಲಿಗೆ ತಿಲಕವನಿಡುವೇ । ಅಚ್ಚ । ಹೊಸ ಬೆಣ್ಣೆಯನಿಕ್ಕಿ ಕಜ್ಜಾಯ ಕೊಡುವೇ ॥ ವಸನಾಭರಣವನಿಡುವೇ । ಚಿಕ್ಕ । ಪಸುಳೆ ನಿನ್ನನು ನೋಡಿ ಸಂತೋಷಪಡುವೇ ॥ ೧ ॥ ಅಣ್ಣಯ್ಯ ಬಲರಾಮ ಸಹಿತಾ । ನೀನು । ಚನ್ನಾಗಿ ತಿರುಗಾಡುವದೇನು ವಿಹಿತಾ ॥ ಹೆಣ್ಣುಗಳ್ಯಾಕೊ ಸಂಗಾತಾ । ಎನ್ನ । ಬಿನ್ನಪವನು ಲಾಲಿಸಿ ಕೇಳು ಪ್ರೀತಾ ॥ ೨ ॥ ಚೋರನೆನಿಸಿಕೊಳಲ್ಯಾಕೊ । ಲಕ್ಷ್ಮೀ । ನಾರಾಯಣನೆಂಬ ಬಿರಿದು ಇರಲಿಕ್ಕೆ ॥ ವಾರಿಜಾಕ್ಷ್ಯರ ಕೂಟ ಸಾಕೋ । ನಮ್ಮ । ಪುರಂದರವಿಠಲ ಮನೆಯೊಳಾಡಬೇಕೋ ॥ ೩ ॥ ಶ್ರೀಃ ॥

೧೫೩. ರಾಗ ಕಾಂಬೋಧಿ, ಝಂಪೆತಾಳ.

ಬಿನ್ನಹಕೆ ಬಾಯಿಲ್ಲವಯ್ಯಾ । ಅನಂತಾಪರಾಧ ಎನ್ನಲ್ಲಿ ಇರಲಾಗಿ ॥ ಪಲ್ಲ ॥ ಶಿಶುಮೋಹ ಸತಿಮೋಹ ಜನನಿಜನಕರ ಮೋಹ । ರಸಿಕಭ್ರಾತರ ಮೋಹ ರಾಜಮೋಹಾ ॥ ಪಶುಮೋಹ ಭೂಮೋಹ ಬಂಧುವರ್ಗದ ಮೋಹ । ಅಸುರಾರಿ ನಿನ್ನ ಮರೆತೆನೋ ಅಕಟ ಕಾಯೋ ॥ ೧ ॥ ಅನ್ನಮದವರ್ಥಮದವಖಿಳ ವೈಭವದ ಮದ । ಮುನ್ನ ಪ್ರಾಯದ ರೂಪ ಮೋಹ ಮದವೋ ॥ ತನ್ನ ಸತ್ವದಾ ಮದ ಧಾತ್ರಿವಶವಾದ ಮದ । ಇನ್ನು ತನಗೆದುರಿಲ್ಲವೆಂತೆಂಬೊ ಮದದಿಂದಾ ॥ ೨ ॥ ಇಷ್ಟು ದೊರಕಿದರೆ ಮತ್ತಿಷ್ಟು ಬೇಕೆಂಬಾಶೆ । ಅಷ್ಟು ದೊರಕಿದರೂ ಮತ್ತಷ್ಟರಾಶೆ ॥ ಕಷ್ಟಬೇಡೆಂಬಾಶೆ ಕಡುಸುಖವ ಕಾಂಬಾಶೆ । ನಷ್ಟ ಜೀವನದಾಶೆ ಪುರಂದರವಿಠಲ ॥ ೩ ॥ ಶ್ರೀಃ ॥

೧೫೪. ರಾಗ ಪರೋಜ, ಆದಿತಾಳ.

ಕೊಡೊ ಕೊಡೊ ಕೊಡೊ ಕೊಡೊ ರಂಗಾ ಕೊಡೊ । ಮಡದಿಯರುಡುವ ಶೀರೆಗಳಾ ॥ ಪಲ್ಲ ॥ ಬಂಡು ಮಾಡದಿರು ಭಾವಜಸಯ್ಯನೆ ॥ ನೀರಜನಾಭನೆ ದಯಮಾಡೋ ॥ ೧ ॥ ಗರತಿಯರೆಲ್ಲರು ಗುಲ್ಲು ಮಾಡುವರು ॥ ದೀನನಾಥನೆ ದಯಮಾಡೋ ॥ ೨ ॥ ಸುರಹೊನ್ನೆಮರವೇರಿ ಅಡಗಿದ ನಿಪುಣನೆ ॥ ಆನಂದ ಭರಿತನೆ ದಯಮಾಡೊ ॥ ೩ ॥ ಮಾನವ ಸೆಳೆದು ಮಮತೆಲಿ ಬಿಗಿದ ॥ ಪುಂಡರೀಕಾಕ್ಷನೆ ದಯಮಾಡೊ ॥ ೪ ॥ ಪುರಾತನ ಪುರುಷಾ,ಪುಂಡರೀಕಾಕ್ಷನೆ ॥ ಪುರಂದರವಿಠಲನೆ ದಯಮಾಡೊ ॥ ೫ ॥ ಶ್ರೀಃ ॥

೧೫೫. ರಾಗ ಹಿಂದುಸ್ಥಾನಿ ಕಾಪಿ, ಆದಿತಾಳ.

ಗುಣವಾಯಿತೆನ್ನ ಭವರೋಗಾ । ಕೃಷ್ಣನೆಂಬ ವೈದ್ಯನು ದೊರಕಿದನು ॥ ಗುಣವಾಗುವವರಿಗೆ ಎಣೆಯಿಲ್ಲ । ಗುಣವಂತರಾಗುವರು ಭವದೆಲ್ಲಾ ॥ ಪಲ್ಲ ॥ ಸಂತತ ಹರಿಭಕ್ತಿಯನ । ಪಾನಾ । ಸಂತತ ಗುರುಭಕ್ತಿ

ಮರುಪಾನಾ ॥ ಸಂತತ ಶ್ರವಣ ಕಠಿನ ಪಥ್ಯ । ಸಂತತ ಕೀರ್ತನ ಉಷ್ಣೋದಕ ॥ ೧ ॥ ಚಂದ್ರೋದಯ ಉಂಟು ಈತನಲ್ಲಿ । ಚಿಂತಾಮಣಿ ಯುಂಟು ಈತನಲ್ಲಿ ॥ ಸಂಚಿಯೊಳಗೆ ತುಂಬ ಮಾತ್ರೆಗಳುಂಟು । ಚೆನ್ನಾಗಿ ಗುಣಮಾಡುವನೀತಾ ॥ ೨ ॥ ಗುರುಸ್ಮರಣೆಯು ಶುಂಠಿಮೆ ಣಸು ಹರಿದಿವ್ಯನಾಮವು ಸಾರನ್ನಾ ॥ ಗುರುಪಾದಸೇವೆಯು ಶೀಸಾರು । ಹರಿಪಾದೋದಕವೇ ಘೃತವು ॥ ೩ ॥ ಸಹಸ್ರನಾಮದಿ ತಾ ವಂದ್ಯಾ । ಸಕಲ ಸ್ವತಂತ್ರಕೆ ತಾ ಬಾಧ್ಯ ॥ ಹರಿ ಸರ್ವೋತ್ತಮನೆಂಬ ವೈದ್ಯ । ಪುರಂದರವಿಠಲನೆ ನಿರವದ್ಯ ॥ ೪ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

### ೧೫೬. ರಾಗ ಮಧ್ಯಮಾವತಿ, ಆದಿತಾಳ.

ದಾರ ಮಗನಮ್ಮ । ರಂಗಯ್ಯ । ದಾರ ಮಗನಮ್ಮ ॥ ಪಲ್ಲ ॥ ದಾರಿಲಿ ನೋಡುತ್ತ । ಧೀರನಾಗಿ ನಿಂತ । ದಾರು ತಿಳಿಯದ ॥ ॥ ಅನುಪಲ್ಲ ॥ ಅರವಿಂದಾನನೆ ಕೇಳ್ ಮರೆಯಾದರೇ ॥ ಅರಿಯದಂದದಿ ಬಂದು ಅಧರ ಮುದ್ದಾಡಿದ ॥ ೧ ॥ ಕಾಂತೆ ಕೇಳೇ ಏಕಾಂತದಿ ಮಲ ಗಿರೆ ॥ ಕಾಂತನಾಗಿ ಏಕಾಂತಕ್ಕೆ ಕರದನೆ ॥ ೨ ॥ ನಾರಿ ಕೇಳೆ ಅಕ್ಕ ಸಾರ ವನೆ ಪೊಕ್ಕು ॥ ಸೇರಿ ನನ್ನಯ ಶೀರೆಯ ಶೆಳೆದ್ಯೊದಾ ॥ ೩ ॥ ಸರಸಿ ಜಾಕ್ಷಿ ಕೇಳ್ ಸರಿರಾತ್ರಿಯೊಳು ॥ ಸರಸರನೆ ಬಂದು ಸರಸವಾಡೀ ಪೋದ ॥ ೪ ॥ ಗಾಡಿಗಾರ ಶ್ರೀಪುರಂದರವಿಠಲ ॥ ಗಾಢಾಲಿಂಗಿಸಿ ತಾ ಓಡಿಪೋದಾ ॥ ೫ ॥ ಶ್ರೀಃ ॥

### ೧೫೭. ರಾಗ ಪೂರ್ವಿ, ಅಟತಾಳ.

ಶಿವ ಕುಲವು ತಿಳಿಯಲಾಗದು ॥ ಪಲ್ಲ ॥ ಕಡಲ ಮಗಳ ಗಂಡ ನಂತೆ । ಅಡವಿಯೊಳಗೆ ಮಡದಿಯಂತೆ ॥ ಪೊಡವಿಗೆ ತಾನೊಡೆಯ ನಂತೆ । ಕೊಡೆಯ ಪಿಡಿದು ಬೇಡಿದನಂತೆ ॥ ೧ ॥ ರಕ್ಕಸರಲ್ಲಿ ಕಾಳಗ ವಂತೆ । ಮರ್ಕಟರೆಲ್ಲ ಬಂಟರಂತೆ ॥ ಪಕ್ಷಿ ಏರಿ ಮೆರೆದನಂತೆ । ಮುಕ್ಕ

ಣ್ಣೀಶ್ವರ ಮೊಮ್ಮಗನಂತೆ ॥ ೨ ॥ ವಿದ್ಯೆಯಲ್ಲಿ ಪ್ರೌಢನಂತೆ । ಯುದ್ಧದಲ್ಲಿ ಶೂರನಂತೆ ॥ ಮುದ್ದು ಪುರಂದರವಿಠಲನಂತೆ । ಬೇಲೂರ ಚನ್ನಿಗನಂತೆ ॥ ೩ ॥ ಶ್ರೀಃ ॥

೧೫೮. ರಾಗ ಕಾಂಬೋಧಿ, ಝಂಪೆತಾಳ.

ನಾ ಮುಂದೆ ರಂಗಾ ನೀ ಎನ್ನ ಹಿಂದೆ । ಎಂದೆಂದು ನಿನ್ನ ನಾಮವ ಎಂದೆಂಬೆ ॥ ಪಲ್ಲ ॥ ಅನಾಥನು ನಾನು ಎನಗೆ ಬಂಧು ನೀನೂ । ಹೀನನು ನಾನು ದಯವಂತ ನೀನೂ ॥ ಧ್ಯಾನಮಂತ್ರನು ನೀನು ಧ್ಯಾನಿಸುವನು ನಾನು । ಜ್ಞಾನಗಮ್ಯನು ನೀನು ಅಜ್ಞಾನಿ ನಾನೂ ॥ ೧ ॥ ಸುರತರುವೆ ನೀನು ಫಲ ಬಯಸುವಂಥವ ನಾನು । ಸುರಧೇನು ನೀನು ಕರದುಂಬೆ ನಾನೂ ॥ ವರ ಚಿಂತಾಮಣಿ ನೀನು ಪರಿಚಿಂತಿಸುವೆ ನಾನು । ಶರಧಿ ಕ್ಷೀರನೆ ನೀನು ತರಳನು ನಾನೂ ॥ ೨ ॥ ಒಂದರೋಳೊಂದೊಂದು ಅವಗುಣವ ಹೊಂದಿದೆ । ಕಂದನೆಂದೆತ್ತಿಕೊ ಸಲಹೊ ಬೇಗ ॥ ತಂದೆ ಶ್ರೀಪುರಂದರವಿಠಲರಾಯ ನೀ । ಬಂದೆನ್ನಾ ಮನದಲಿ ನಲಿನಲಿದಾಡೂ ॥ ೩ ॥ ಶ್ರೀಃ ॥

೧೫೯. ರಾಗ ನಾದನಾಮಕ್ರಿಯೆ. ಆದಿತಾಳ.

ಗೋಪಿಯ ಭಾಗ್ಯವಿದೂ । ಶ್ರೀಪತಿ ತಾ ಶಿಶುರೂಪಿನಲ್ಲಿರುವದು ॥ ಪಲ್ಲ ॥ ಕಡು ಮುದ್ದು ರಂಗನ ತೊಡೆಯ ಮೇಲೆತ್ತುತ । ಜಡೆಯ ಹಣೆದು ಹೂವಾ ಮುಡಿಸಿ ಬೇಗಾ ॥ ಬಿಡದೆ ಮುತ್ತಿನ ಚಂದದರಳೆಲೆ ಮಲಕನು । ಸಡಗರದಿಂದಲಲಂಕರಿಸಿದಳೂ ॥ ೧ ॥ ನಿತ್ಯ ನಿರ್ಮಲನಿಗೆ ನೀರನೆರದು ತಂದು । ಎತ್ತಿ ತೊಡೆಯೊಳಿಟ್ಟು ಮೊಲೆಯೂಡಿ ॥ ಮುತ್ತ ಕೊಟ್ಟಳು ಬಲು ವಿಧದಿಂದ ಆಡಿಸಿ । ಅರ್ತಿಯಿಂದಲಿ ಪಾಡಿ ತಾ ತೂಗಿದಳೂ ॥ ೨ ॥ ದೃಷ್ಟಿ ಮುಟ್ಟಿತೆಂದು ಇಟ್ಟು ವಿಭೂತಿಯ । ತಟ್ಟೆಯೊಳಾರತಿಗಳ ಬೆಳಕೂ ॥ ಥಟ್ಟನೆ ಜೇವುಪ್ಪುಗಳ ನಿವಾಳಿಸಿ । ತೊಟ್ಟಿಲೊಳಗೆ ಇಟ್ಟು ತೂಗಿ ಪಾಡಿದಳೂ ॥ ೩ ॥ ಎನ್ನಪ್ಪ ರಂಗ ನೀ ಸುಮ್ಮನಿರೋ ದೊಡ್ಡ । ಗುಮ್ಮ ಬಂದೈದಾನೆ ಅಳಬೇಡಾ ॥ ಬೊಮ್ಮನ ಪಿತ ನಿನಗ

ವಿನ್ಮಯ ಕೊಡುವೆನು । ಸುವಮ್ಮನೀನಿರು ಎಂದು ಪಾಡಿ ತೂಗಿದಳೂ ॥
॥ ೪ ॥ ಮಾಧವ ಜೋ ಮಧುಸೂದನ ಜೋಜೋ । ಯಾದವರಾಯ
ಶ್ರೀಜೋ ಎನ್ನುತಾ ॥ ಆದಿ ಮೂರುತಿ ನಮ್ಮ ಪುರಂದರವಿಠಲನ । ಆದ
ರದಿಂದಲಿ ಪಾಡಿ ತೂಗಿದಳೂ ॥ ೫ ॥ ಶ್ರೀಃ ॥

## ೧೬೦. ರಾಗ ಕಲ್ಯಾಣಿ, ಅಟತಾಳ.

ನಂಬಿ ಕೆಟ್ಟವರಿಲ್ಲವೋ । ರಂಗಯ್ಯನ । ನಂಬದೆ ಕೆಟ್ಟರಿ ಕೆಡಲೀ ॥
॥ ಪಲ್ಲ ॥ ಅಂಬುಜನಾಭನ ಪಾದವ ನೆನೆಯೆ ಭ । ವಾಂಬುಧಿ ದುಃಖವ
ಪರಿಹರಿಸುವ ಕೃಷ್ಣ ॥ ಅನುಪಲ್ಲ ॥ ಬಲಿಯ ಪಾತಾಳಕ್ಕೆ । ಇಳಿಸಿ ಭಕ್ತ।
ಗೊಲಿದು ಬಾಗಿಲ ಕಾಯ್ದನೂ ॥ ಛಲದೊಳು ಅಸುರನ ಶಿರಗಳ ತರಿದು
ತಾ । ನೊಲಿದು ವಿಭೀಷಣಗೆ ಪಟ್ಟಗಟ್ಟಿದ ಕೃಷ್ಣಾ ॥ ೧ ॥ ತರಳ
ಪ್ರಹ್ಲಾದಗೊಲಿದೂ । ಉಗುರಿನಿಂದ । ಹಿರಣ್ಯನುದರ ಶೀಳಿದ ॥ ಕರಿರಾ
ಜಗೊಲಿದು ನೆಗಳು ನುಂಗುತಿರಲಾಗಿ । ಶಿರವ ತರಿದು ಕಷ್ಟ ಪರಿಹರಿ
ಸಿದ ಕೃಷ್ಣಾ ॥ ೨ ॥ ಪಾಂಡವರಿಂಗೊಲಿದೂ । ಕೌರವರನ್ನು । ತುಂಡು
ಛಿದ್ರವ ಮಾಡಿದ ॥ ಅಂಡಲೆದು ದ್ರೌಪದಿ ಸಭೆಯೊಳು ಕೂಗೆ । ಬಂದು
ಕಾಯ್ದ ಶ್ರೀಪುರಂದರವಿಠಲಾ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೬೧. ರಾಗ ಮುಖಾರಿ, ಝಂಪೆತಾಳ.

ಉಬ್ಬದಿರು ಉಬ್ಬದಿರು ಎಲೊ ಮಾನವಾ । ಹೆಬ್ಬುಲಿಯಂತೆ ಯಮ
ಬೊಬ್ಬಿ ಕಾದಿರುವಾ ॥ ಪಲ್ಲ ॥ ಸಾಗರ ತರಂಗದಂತೆ ಸಾವು ಹುಟ್ಟಿರ
ಲಾಗಿ । ಭೋಗ ಭಾಗ್ಯಗಳೆಂದು ಬಳಲಿದ್ಯಾಕೋ ॥ ನಾಗಪೆಡೆ ನೆಳ
ಲಲ್ಲಿ ಇರುವ ಕಪ್ಪೆಯ ರೀತಿ । ಕೂಗಿ ಚೀರಿದರೆ ನೀನಾಗ ಕೇಳುವರೇ ॥
॥ ೧ ॥ ಮಾಳಿಗೇ ಮನೆಯೆಂದು ಮತ್ತೆ ಸತಿಸುತರೆಂದು । ಜಾಳಿಗೆ ಧನ
ಧಾನ್ಯಪಶುಗಳೆಂದೂ ॥ ವೇಳೆ ತಪ್ಪದೆ ತಿಂಬೊ ಕೂಳು ತನಗುಂಟೆ
ನಲು । ಗಾಳಿಗಿಕ್ಕಿದ ದೀಪ ಬಾಳು ಬದುಕೆಲ್ಲಾ ॥ ೨ ॥ ಅಸ್ಥಿರದ ಭವ

ದೊಳಗೆ ಅತಿಶಯುಗಳೆಣಿಸದೆ । ವಸ್ತುವಿದರಲಿ ಕೇಳೊ ವೈರಾಗ್ಯವೂ ॥ ವಿಸ್ತಾರವುಹಿಮ ಶ್ರೀಪುರಂದರವಿಠಲನ್ನ । ಸ್ವಸ್ಥ ಚಿತ್ತದಿ ನೆನೆದು ಮುಕ್ತಿ ಪಡೆ ಮನುಜಾ ॥ ೩ ॥ ಶ್ರೀಃ ॥

## ೧೬೨. ರಾಗ ಪಂತುವರಾಳಿ, ಅಟತಾಳ.

ಯಾವಾಗಲೂ ಹೇಳಬಾರದೆ । ವಾಸು । ದೇವ ಕೈಬಿಡಬೇಡೆಂದೆನುತಲಿ ॥ ಪಲ್ಲ ॥ ಇಕ್ಕಿ ಎರೆವರಿಲ್ಲ ಇಷ್ಟಬಂಧುಗಳಿಲ್ಲ । ಅಕ್ಕತಂಗಿಯರಣ್ಣತಮ್ಮರಿಲ್ಲ ॥ ಒಕ್ಕುಂಡಿಯಾಗಿ ನಾ ಅಡುತಿರುವೆ ಸದಾ । ದುಃಖಪಡುವೆನೆಂದು ರಕ್ಕಸಾಂತಕನೊಳು ॥ ೧ ॥ ಮಡದಿ ಮಕ್ಕಳು ಇಲ್ಲ ಒಡವೆ ವಸ್ತುಗಳಿಲ್ಲ । ಪಡೆದ ತಾಯ್ತಂದೆಗಳೊಬ್ಬರಿಲ್ಲ ॥ ಎಡವುತಿದ್ದರೆ ಬಿದ್ದು ಎತ್ತಿಕೊಂಬುವರಿಲ್ಲ । ಒಡೆಯ ನೀನೆನ್ನ ಕೈಬಿಡಬೇಡೆಂದೆನುತಲಿ ॥ ೨ ॥ ಮಾಡಿದ್ದ ಮನೆಯಲ್ಲಿ ಬೇಡಿರ್ದ ಧನವಿಲ್ಲ । ಆಡಿಸಿಕೊಳ್ಳುವ ಮಕ್ಕಳಿಲ್ಲ ॥ ಆಡುವಾಗಲು ಸ್ತುತಿ ಮಾಡುವೆನೆಂದರೆ । ಮೂಢರೊಳಗೆ ಬರಿ ಮೂಢನಾಗಿಹೆನೆಂದು ॥ ೩ ॥ ಇಷ್ಟಾದ ಮೇಲೆ ಕೈಬಿಟ್ಟೆಯಾದರೆವಿನ್ನ । ಕಟ್ಟಾದೆಂದಿಗು ಬಿಡೆ ನಿನ್ನನು ॥ ಇಷ್ಟಾರ್ಥ ಕೊಡುವಂಥ ದೇವನಲ್ಲೆಂದು ಈ । ಸೃಷ್ಟಿಯೊಳಪಕೀರ್ತಿ ಬರುವದು ನಿನಗೊಂದು ॥ ೪ ॥ ಮೋಕ್ಷದಾಯಕ ವಿಶ್ವರೂಪ ವಿಶ್ವಾತ್ಮಕ । ಸಾಕ್ಷಿಸ್ವರೂಪ ಸರ್ವೇಶ್ವರನೆ ॥ ಸಾಕ್ಷಾತು ಶ್ರೀಗುರುಪುರಂದರವಿಠಲನೆ । ರಕ್ಷಿಸಬೇಕೆಂದು ಲಕ್ಷ್ಮೀವಲ್ಲಭನೊಳು ॥ ೫ ॥ ಶ್ರೀಃ ॥

## ೧೬೩. ರಾಗ ಆನಂದಭೈರವಿ, ಆದಿತಾಳ.

ಎಂಥಾ ಪಾಪಿ ದೃಷ್ಟಿ ತಾಗಿತು । ಗೋಪಾಲಕೃಷ್ಣಗೆ । ಕೆಟ್ಟ ಪಾಪಿ ದೃಷ್ಟಿ ತಾಗಿತು ॥ ಪಲ್ಲ ॥ ಶಿಶು ಹಸಿದನೆಂದು ಗೋಪಿ । ಮೊಸರು ಕುಡಿಸುತ್ತಿರಲು ನೋಡಿ ॥ ಹಸಿದ ಬಾಲರ ದೃಷ್ಟಿತಾಗಿ । ಮೊಸರು ಕುಡಿಯಲೊಲ್ಲನೆ ॥ ೧ ॥ ಕೃಷ್ಣ ಹಸಿದನೆಂದು ಗೋಪಿ । ಬಟ್ಟಲೊಳಗೆ ಕ್ಷೀರ ಕೊಡಲು ॥ ಕೆಟ್ಟ ಬಾಲರ ದೃಷ್ಟಿತಾಗಿ । ಕೊಟ್ಟ ಹಾಲು ಮುಟ್ಟನೆ ॥ ೨ ॥

ಚಿನ್ನ ಹಸಿದನೆಂದು ಗೋಪಿ । ಬೆಣ್ಣೆ ಕೈಯಲ್ಲಿ ಕೊಡಲು ನೋಡಿ ॥ ಸಣ್ಣ ಬಾಲರ ದೃಷ್ಟಿತಾಗಿ । ಬೆಣ್ಣೆ ವಿಷವುವಾಯಿತೆ ॥ ೩ ॥ ಅಂಗಿ ಹಾಕಿ ಉಂಗುರವಿಟ್ಟು । ಕಂಗಳಿಗೆ ಕಪ್ಪನಿಟ್ಟು ॥ ಅಂಗಳದೊಳು ಆಡೊ ಕೃಷ್ಣಗೆ ಹೆಂಗಳಾ ದೃಷ್ಟಿಯಿದೇನೋ ॥ ೪ ॥ ಶಲ್ಲೆ ಉಡಿಸಿ ಮುಲ್ಲೆ ಮುಡಿಸಿ । ಚೆಲ್ಲುವ ಫಣೆಗೆ ತಿಲಕನಿಟ್ಟು ॥ ವಲ್ಲಭಪುರಂದರವಿಠಲಗೆ । ಫುಲ್ಲನೇತ್ರೇರು ನೋಡಿದರೇನೋ ॥ ೫ ॥ ಶ್ರೀಃ ॥

## ೧೬೪. ರಾಗ ಆನಂದಭೈರವಿ, ತ್ರಿಪುಟತಾಳ.

ಸಿಕ್ಕಿದಾನೆಲೆ ಜಾಣೇ ಶ್ರೀವೇಣುಗೋಪಾಲಾ । ಭಕ್ತವತ್ಸಲದೇವಾನೇ ॥ ॥ ಪಲ್ಲ ॥ ಮಕ್ಕಳ ಚಂಡಿಕೆ ಮರದ ಕೊನೆಗೆ ಕಟ್ಟಿ । ಫಕ್ಕನೆ ಕೃಷ್ಣ ಚಪ್ಪಳೆ ನಿಕ್ಕುವನಮ್ಮ ॥ ಅನುಪಲ್ಲ ॥ ಹೆಣ್ಣು ಮಕ್ಕಳು ಬಚ್ಚಲೊಳ ಗೆಣ್ಣೆ ಹಚ್ಚಿಕೊಂಡು । ಬಣ್ಣ ವಸ್ತ್ರವ ಬಿಚ್ಚಿ ಬರೆ ಮೈಯುಲಿರೆ ॥ ಕಣ್ಣಿಗೆ ಬಿಸಿನೀರು ಚೆಲ್ಲಿ ಶೀರೆಯನೊಯ್ದು । ಉನ್ನಂತವಾದ ವೃಕ್ಷವನೇರಿದ ನಮ್ಮ ॥ ೧ ॥ ಪಟ್ಟೆ ಮಂಚದ ಮೇಲೆ ಪತಿಯಂತೆ ಕುಳ್ಳಿರೆ । ಎಷ್ಟು ಸ್ವತಂತ್ರವೆ ಆತನಿಗೆ ॥ ಉಟ್ಟ ಶೀರೆಯ ಶೆಳೆದು ಬಟ್ಟಕುಚವ ಪಿಡಿದು । ಎಷ್ಟೆಂತ ಪೇಳಲಿ ಭ್ರಷ್ಟವಮಾಡಿದನಮ್ಮ ॥ ೨ ॥ ಸಡಗರದಿ ಷೋಡಶ ಸಹಸ್ರಗೋಪ್ಯರ । ಒಡಗೂಡಿ ಕೊಳಲನೂದುವ ದಧಿಯ ॥ ಕಡೆವ ಗೋಪಿಯ ಸೆರಗಾ ಜಡೆಪಿಡಿದೆಳೆವಾ ಎ । ಮ್ಮೊಡೆಯನು ಪುರಂದರ ವಿಠಲರಾಯನೇ ॥ ೩ ॥ ಶ್ರೀಃ ॥

## ೧೬೫. ರಾಗ ಸೌರಾಷ್ಟ್ರ, ಆದಿತಾಳ.

ವೃಂದಾವನದೇವಿ ನಮೋ ನಮೋ । ಚೆಲ್ವ । ಮಂದರಧರನ ಮನ ಪ್ರಿಯಳೆ ॥ ವೃಂದಾವನದೇವಿ ನಮೋ ನಮೋ ॥ ಪಲ್ಲ ॥ ನಿನ್ನ ಸೇವಿಸಿ ಉದಕವನೆರೆಯಲು । ಮುನ್ನ ಮಾಡಿದ ಪಾಪ ಹೋಗುವದು ॥ ಎನ್ನ ಇಪ್ಪತ್ತೊಂದು ಕುಲದವರಿಗೆಲ್ಲ । ಉನ್ನಂತ ವೈಕುಂಠ ಪದವೀವಳೇ ॥ ॥ ೧ ॥ ಒಂದೊಂದು ದಳದಲ್ಲಿ ಒಂದೊಂದು ಮೂರುತಿ । ಸಂದಣಿಸಿವೆ ಬಹು ಗುಪಿತದಲಿ ॥ ಬಂದು ಕುಂಕುಮ ಶಂಖಚಕ್ರ ಧರಿಸಿದರೆ ।

ತಂದೆ ನಾರಾಯಣ ಕರದೊಯ್ಯುವ ॥ ೨ ॥ ಹರಿಗೆ ಸಮರ್ಪಿಸಿದ ತುಲಸಿ ನಿರ್ಮಾಲ್ಯವ । ಕೊರಳೊಳು ಧರಿಸಿ ಕರ್ಣದೊಳಿಟ್ಟರೆ ॥ ದುರಿತ ರಾಶಿಗಳೆಲ್ಲ ಅಂಜಿ ಓಡುತಲಿವೆ । ಹರಿ ತನ್ನವರೆಂದು ಕೈಪಿಡಿವಾ ॥ ೩ ॥ ಹತ್ತು ಪ್ರದಕ್ಷಿಣೆ ಹತ್ತು ವಂದನೆ ಮಾಡೆ । ಉತ್ತಮ ವೈಕುಂಠ ಪದವೀವಳೇ ॥ ಭಕ್ತಿಯಿಂದಲೆ ಬಂದು ಕೈಮುಗಿದವರನ್ನು । ಕರ್ತ ನಾರಾಯಣ ಕರದೊಯ್ವನು ॥ ೪ ॥ ಅವಾವ ಪರಿಯಲ್ಲಿ ಸೇವೆಯ ಮಾಡಲು । ಪಾವನ ವೈಕುಂಠಪದವೀವಳೇ ॥ ದೇವ ಶ್ರೀಪುರಂದರವಿಠಲರಾಯನ । ದೇವಿ ನಿನ್ನ ಮುಟ್ಟೆ ತ್ರಾಹಿಯೆಂಬೆ ॥ ೫ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೬೩. ರಾಗ ಸೌರಾಷ್ಟ್ರ, ಆದಿತಾಳ

ಕಲ್ಯಾಣಂ ತುಲಸಿ ಕಲ್ಯಾಣಂ । ಕಲ್ಯಾಣವೇ ನಮ್ಮ ಕೃಷ್ಣ ಶ್ರೀತುಲಸಿಗೆ ಬಲ್ಲಿದ ಶ್ರೀವಾಸುದೇವನಿಗೆ ॥ ಪಲ್ಲ ॥ ಅಂಗಳದೊಳಗೆಲ್ಲ ತುಲಸಿಯ ವನಮಾಡಿ । ಶೃಂಗಾರವ ಮಾಡಿ ಶೀಘ್ರದಿಂದ ॥ ಕಂಗಳ ಪಾಪವ ಪರಿಹರಿಸುವ ಮುದ್ದು । ರಂಗ ಬಂದಲ್ಲಿ ತಾ ನೆಲಸಿದನೂ ॥ ೧ ॥ ಮಿಂದು ಮಡಿಯನುಟ್ಟು ಸಂದೇಹವ ಬಿಟ್ಟು । ತಂದ ಶ್ರೀಗಂಧಾಕ್ಷತೆಗಳಿಂದ ॥ ಸಿಂಧುಶಯನನ ವೃಂದಾವನದಿ ಪೂಜಿಸೆ । ಕುಂದದ ಭಾಗ್ಯವ ಕೊಡುತಿಹಳೂ ॥ ೨ ॥ ಭಕ್ಷ್ಯಭೋಜ್ಯಂಗಳ ನೈವೇದ್ಯವನಿತ್ತು । ಲಕ್ಷಬತ್ತಿಯ ದೀಪವ ಹಚ್ಚಿ ಅ ॥ ಧೋಕ್ಷಜ ಸಹಿತ ವೃಂದಾವನ ಪೂಜಿಸೆ । ಸಾಕ್ಷಾತ್ ಮೋಕ್ಷವ ಕೊಡುತಿಹಳು ॥ ೩ ॥ ಉತ್ಥಾನ ದ್ವಾದಶಿ ದಿವಸದಲಿ ಕೃಷ್ಣಾ । ಉತ್ತಮ ತುಲಸಿಗೆ ವಿವಾಹವಾ ॥ ಚಿತ್ತನಿರ್ಮಲರಾಗಿ ಮಾಡಿದವರಿಗೆ । ಉತ್ತಮಗತಿ ಈವ ಪುರಂದರ ವಿಠಲ ॥ ೪ ॥ ಶ್ರೀಃ ॥

## ೧೬೭. ರಾಗ ಪೂರ್ವಿ, ಅಟತಾಳ.

ಕಾಯಲಾರೆನು ಕೃಷ್ಣ ಕಂಡವರ ಬಾಗಿಲನೂ ॥ ನಾಯಿಕುನ್ನಿಗಳಂತೆ ಪರರ ಪೀಡಿಸುತಾ ॥ ಪಲ್ಲ ॥ ಉದಯದಲಿ ಎದ್ದು ಸಂಧ್ಯಾನ ವಿಧಿ

ಗಳ ಬಿಟ್ಟು । ಪದುಮನಾಭನ ಸೇವೆಯನು ಮಾಡದೆ ॥ ಮೊದಲೆ ನಿನ್ನ ರ್ಚಿಸದೆ ನರರ ಸದನವ ಪೊಕ್ಕು । ಒದಗಿ ಸೇವೆಯ ಮಾಡಿ ಅವರ ಬಾಗಿಲನೂ ॥ ೧ ॥ ಕಲ್ಲು ಕರಗಿಸಬಹುದು ಹುರಿಗಡಲೆಯೊಳು ಅದರ । ತೈಲವನು ತೆಗದಾದರುಣಲುಬಹುದೂ ॥ ಬಲ್ಲಿದವರ ಮನಸು ಮೆಚ್ಚಿಸಲಾರೆ ಪ್ರತಿ । ಹಲ್ಲು ಕಿರಿಕಿರಿದು ಹಂಬಲಿಸಿ ಬಾಯಿಬಿಡುತಾ ॥ ೨ ॥ ಇಂತು ನಾನಾ ಚಿಂತೆಯಲಿ ನಿನ್ನ ನೆನೆಯದೆ । ಭ್ರಾಂತಿಯೆಂದೆಂಬ ಹೆಬ್ಬಲೆಗೆ ಸಿಲುಕಿ ॥ ಅಂತ್ಯವಾದಿಯು ಕಾಣೆ ಆರಿಕೆ ನಿನಗಿನಿತಿಲ್ಲ । ಚಿಂತೆಯನು ಬಿಡಿಸಯ್ಯ ಪುರಂದರವಿಠಲಾ । ಕಾಯಲಾರೆನು ॥ ೩ ॥ ಶ್ರೀಃ ॥

## ೧೬೮. ರಾಗ ಕಲ್ಯಾಣಿ, ಝಂಪೆತಾಳ.

ಈ ಪರಿಯ ಸೊಬಗು ಇನ್ಯಾವ ದೇವರಿಗುಂಟು । ಗೋಪೀಜನ ಪ್ರಿಯ ಗೋಪಾಲರಾಯಗಲ್ಲದೇ ॥ ಪಲ್ಲ ॥ ಧೊರೆತನದಿ ಈಕ್ಷಿಸಲು ಧರಣಿದೇವಿಯ ರಮಣ । ಸಿರಿತನದಿ ನೋಡೆ ಲಕ್ಷ್ಮೀಕಾಂತನೂ ॥ ಹಿರಿತನದಿ ನೋಡೆ ಕಮಲಸಂಭವನಯ್ಯ । ಗುರುತನದಲೀಕ್ಷಿಸಲು ಗುರುಮಧ್ವ ಜನಕ ॥ ೧ ॥ ಪಾವನತೆಯಲಿ ನೋಡೆ ಅಮರ ಗಂಗಾ ಜನಕ । ದೇವತ್ವದಲಿ ನೋಡೆ ದಿವಿಜರೊಡೆಯಾ ॥ ಲಾವಣ್ಯದಲಿ ನೋಡೆ ಲೋಕಮೋಹನ ಪಿತನು । ಶೂರತ್ವದಲಿ ನೋಡೆ ದನುಜಾಂತಕ ॥ ೨ ॥ ಗಗನದಲಿ ಸಂಚರಿಪ ಗರುಡ ವಾಹನತುರಗ । ಜಗವ ಧರಿಸಿದ ಅಹಿಯೆ ಪರಿಯಂಕವೂ ॥ ನಿಗಮಗೋಚರ ಪುರಂದರ ವಿಠಲಗಲ್ಲದೆ । ಮಿಗಿಲಾದ ದೇವರ್ಕಳಿಗೀಭಾಗ್ಯವುಂಟೇ ॥ ೩ ॥ ಶ್ರೀಃ ॥

## ೧೬೯. ರಾಗ ಶಂಕರಾಭರಣ, ಅಟತಾಳ.

ಹೆಂಡಿರನಾಳುವಳೀಕನ್ನಿಕೆ । ಗಂಡನಿಲ್ಲದ ಹೆಂಗಸೀಕನ್ನಿಕೇ ॥ ಪಲ್ಲ ॥ ಮೇರು ಮಂದರವ ಕಡಗೋಲನೇ ಮಾಡಿ । ಉರಗ ವಾಸುಕಿ ನೇಣ ಮಾಡಿ ॥ ಕ್ಷೀರಾಂಬುಧಿ ಸುರರಸುರರು ಮಥಿಸಲು । ಕೂರುಮರೂಪವ ಧರಿಸಿದ ಕನ್ನಿಕೆ ॥ ೧ ॥ ಶಿಶುರೂಪ ತಾಳಿ ಆಲದೆಲೆಯ ಮೇಲೆ । ಅಸಮಯ ಜಲದೊಳು ಮಲಗಿಕೊಂಡು ॥ ವಶವಾಗದ ಮುನ್ನಾ

ಹೂವಿನ್ಹೊಕ್ಕಳಲ್ಲಿ । ಬಸುರಿಂದ ಬೊಮ್ಮನ ಪಡೆದಾ ಕನ್ನಿಕೆ ॥ ೨ ॥ ಪಟ್ಟಾವಳಿಯನುಟ್ಟು ಬೊಟ್ಟಾ ಕುಪ್ಪುಸ ತೊಟ್ಟು । ಬೊಟ್ಟ ಗಿಂಡಿಯ ಕೈಯ ಪಿಡಿದುಕೊಂಡು ॥ ದಿಟ್ಟ ಸ್ತ್ರೀರೂಪವ ತಾಳಿ ದೈತ್ಯರನೆಲ್ಲ । ಅಟ್ಟ ಹಾಸದಿ ಮೋಹಿಸಿದ ಕನ್ನಿಕೆ ॥ ೩ ॥ ಅಂಥ ಇಂಥವನೆಂದು ಕೇಳುತ್ತ ಇರಲಾಗಿ । ಸಂತತ ಸುರರಿಗೆ ಅಮೃತವನು ॥ ಪಂಕ್ತಿಯೊಳಗೆ ಅಳವಡಿ ಸದೆ ಬಡಿಸಿದ । ಎಂಥಾ ಸೊಬಗಿನ ಮೋಹದ ಕನ್ನಿಕೆ ॥ ೪ ॥ ಬೇಗೆ ಗಣ್ಣನಿಗೆ ಬಿಸಿ ಕೈಯನಿಡಲು ಬರೆ । ಭೋಗದಾಸೆಯ ದೋರಿ ಬೂದಿ ಮಾಡ್ದಾ ॥ ಭಾಗೀರಥಿಯ ಪಿತ ಪುರಂದರವಿಠಲಾ । ಭೋಗಿ ಬೇಲೂರ ಚನ್ನಿಗ ಕನ್ನಿಕೇ ॥ ೫ ॥ ಶ್ರೀಃ ॥

## ೧೭೦. ರಾಗ ಧನಾಸಿ, ಆದಿತಾಳ.

ಹರಿನಾಮಾಮೃತ ರುಚಿಕರವೆನಿಪುದೆ ಪರಮ ಭಕ್ತರಿಗಲ್ಲದೇ ॥ ಅರಿಯದ ಕಡುಮೂರ್ಖ ಜನರಿಗೆ ಪೇಳ್ದರೆ ಹರುಷವಾಗಬಲ್ಲದೇ ॥ ಪಲ್ಲ ॥ ಅಂದುಗೆ ಅರಳೆಲೆ ಯಿಟ್ಟರೆ ಕೋಡಗ ಕಂದನಾಗ ಬಲ್ಲದೇ । ಹಂದಿಗೆ ಹಾಲು ಸಕ್ಕರೆ ಉಣ್ಣಿಸೆ ಗಜೇಂದ್ರನಾಗ ಬಲ್ಲದೇ ॥ ಚಂದ್ರನ ಕಿರಣವು ಚಂದದಿ ತೋರಲು ಅಂಧ ನೋಡಬಲ್ಲನೇ । ಇಂದಿರೆಯರಸನ ನಾಮದ ಮಹಿಮೆಯ ಮಂದಮತಿಯು ಬಲ್ಲನೇ ॥ ೧ ॥ ಉರಗಕೆ ಕ್ಷೀರವನೆ ರೆಯಲು ವಿಷವೆಲ್ಲ ಹರಿದು ಬಿಡಲುಬಲ್ಲದೇ । ಕರದಲಿ ನೀಲಿಯ ತೊಳೆಯಲು ಅದರ ಕರಿದು ಹೋಗಬಲ್ಲದೇ ॥ ಪರಿಪರಿ ಭಂಗಾರ ವಿಟ್ಟರೆ ದಾಸಿಯು ಅರಸಿಯಾಗಬಲ್ಲಳೇ । ಭರದಿಂದ ಶ್ವಾನನ ಬಾಲವ ತಿದ್ದಲು ಸರಳವಾಗ ಬಲ್ಲದೇ ॥ ೨ ॥ ಮೋಡಕ್ಕೆ ಮಯ್ಯೂರ ಕುಣಿ ವಂತೆ ಕುಕ್ಕುಟ ನೋಡಿ ಕುಣಿಯಬಲ್ಲದೇ । ಗೋಡೆಯ ಇದಿರಲಿ ನಾಟ್ಯ ವನಾಡಲು ಗೋಡೆ ನೋಡಬಲ್ಲದೇ । ಹಾಡಿಕೆ ಲಕ್ಷಣ ಬಧಿರಗೆ ಪೇಳ್ದರೆ ಕೇಳಿ ಹರುಷನಹನೇ । ರೂಢಿಯೊಳಗೆ ನಮ್ಮ ಪುರಂದರ ವಿಠಲನ ಮೂಢ ಮನುಜ ಬಲ್ಲನೇ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೭೧. ರಾಗ ಕಲ್ಯಾಣಿ, ಅಟತಾಳ.

ಸಂದಿತಯ್ಯ ಪ್ರಾಯವು ಸಂದಿತಯ್ಯ ॥ ಪಲ್ಲ ॥ ಒಂದು ದಿನವು ಸುಖವು ಇಲ್ಲ । ಕುಂದಿಹೋದೆ ಕಷ್ಟದಿಂದ ॥ ಬಂಧನವನು ಬಿಡಿಸುತೆನ್ನ । ತಂದೆ ನೀನೆ ರಕ್ಷಿಸಯ್ಯ ॥ ಅನುಪಲ್ಲ ॥ ತಂದೆಯುದರದಿ ಮೂರು ತಿಂಗಳು । ಸಂದು ಹೋಯಿತು ತಿಳಿಯದೇ । ಬೆಂದೆ ನವಮಾಸದೊಳು ಗರ್ಭದಿ । ನಿಂದು ತಾಯಿಯ ಗರ್ಭದಿ ॥ ಕುಂದಿತಾಯುವು ಒಂದು ವರುಷಾ । ಇಂದಿರೇಶನೆ ಕೇಳು ದುಃಖವಾ । ಬಂಧನದೊಳಗೆ ನಿಂದೆ ಅನುದಿನ । ಮುಂದೆ ಮೋಕ್ಷದ ಮಾರ್ಗ ಕಾಣದೆ ॥ ೧ ॥ ಕತ್ತಲೆಯೊಳಿರಲಾರೆನೆನುತಲಿ । ಹೊತ್ತೆ ಹರಕೆಯ ನಿನ್ನೊಳೂ । ನಿತ್ಯದಲಿ ಮಲ ಮೂತ್ರ ಬಾಲ್ಯದಿ । ಹೊತ್ತುಗಳದೆನು ಎನ್ನೊಳೂ ॥ ಮತ್ತೆ ಹದಿನಾರರ ಪ್ರಾಯದಿ । ಉಕ್ಕಿ ನಡದೆನು ಧರೆಯೊಳು । ಹತ್ತಿ ಸಂಸಾರದ ಮಾಯಾ । ಸಿಕ್ಕಿದೆನು ಭವಬಲೆಯೊಳೂ ॥ ೨ ॥ ಎಡೆಬಿಡದೆ ಅನುದಿನದಿ ಪಾಪದ । ಕಡಲೊಳಗೆ ನಾ ಬಿದ್ದೆನೊ । ದಡವ ಕಾಣದೆ ದುಃಖದೊಳು ಬೆಂ । ದೊಡಲೊಳಗೆ ನಾ ನೊಂದೆನೊ ॥ ಬಿಡದೆ ನಿನ್ನಯ ಧ್ಯಾನವೆಂದೆಂ । ಭಡಗವೇರಿಸು ಎಂದೆನೊ । ದೃಢದಿ ನಿನ್ನಯ ಪಾದ ಸೇರಿಸೊ । ಒಡೆಯ ಪುರಂದರವಿಠಲ ॥ ೩ ॥ ಶ್ರೀಃ ॥

## ೧೭೨. ರಾಗ ಪೂರ್ವಿ, ಅಟತಾಳ.

ಕೊಡುವದೆಂದು ಎನ್ನ ಕೊಂಬುವದೆಂದು ಕೈ । ಪಿಡಿವದೆಂದು ನೀ ನೊಲಿವದೆಂದೂ ॥ ಕೊಡು ಕೊಂಬೊ ಮಹದನುಗ್ರಹದವನೆಂದು ನಿ । ನ್ನಡಿಗೆ ಸೇರಿದೆನಯ್ಯಾ ಬಡತನಕೌಷಧ ॥ ಕೊಡುವದೆಂದು ॥ ಪಲ್ಲ ॥ ಶ್ವಾನ ಸೂಕರ ಜನ್ಮನಾನುಂಬೆನೆನ್ನಲ್ಲಿ । ನೀನೆ ತದ್ರೂಪವನಾದೆಯಲ್ಲಾ ॥ ಹೀನರೊಳ್ನಾನತಿ ಹೀನನಾಗಿ ಅಭಿ । ಮಾನಿಯಾಗಿ ಕಾಲ ಕಳೆದೆನಲ್ಲಾ ॥ ವಾನರನಂಗಯ್ಯ ಮಾಣಿಕ್ಯದಂತೆನ್ನ । ಮಾನದಂತರ್ಯಾಮಿ ಸಿಕ್ಕಿದೆಯಲ್ಲಾ ॥ ಯೇನಾದರು ನಿನ್ನೊಳು ಯೆನಗೆ ಮುಂದೆ । ಜ್ಞಾನ ಭಕ್ತಿ ವೈರಾಗ್ಯಭಾಗ್ಯವನ್ನ ॥ ೧ ॥ ಕಾಡಿನ ಮೃಗವು ಹಾಡಿದರೆ ನಂಬಿ ।

ಆಡುವದಲ್ಲದೆ ಓಡುವದೇ ॥ ಗಾಡಿಪ್ಪ ಪಶುವಿನ ಬಾಲವ ಕಟ್ಟಿಸಿ। ಕೂಡೆ ಪಾಲ್‌ಗರೆಯಲು ದಬ್ಬುವದೇ ॥ ಆಡುವ ಶಿಶು ತಪ್ಪು ಮಾಡಲು ಜನನಿ ಕೊಂ । ಡಾಡುವಳಲ್ಲದೆ ದೂಡುವಳೇ ॥ ಮೂಢಬುದ್ಧಿಯೊಳ್ ಕೆಟ್ಟೆನೆಂದು ಕೋಪ । ಮಾಡಬೇಡ ದಯಮಾಡಿ ನೀಡಿಪ್ಪವ ॥ ೨ ॥ ಹಣ್ಣಾದ ಹೊತ್ತು ಬ್ಯಾ ಹುಣ್ಣಾದ ತೆರದಂತೆ। ನಿನ್ನ ಸೇರುವ ಯತ್ನ ಬಿಟ್ಟು ನಾನೂ ॥ ಹೆಣ್ಣು ಹೊನ್ನು ಮಣ್ಣಿಗಾಗಿ ನಾ ಭ್ರಮೆಗೊಂಡು । ಸುಣ್ಣಗಿಕ್ಕಿದ ನೀರಿನಂತಾದೆನೊ ॥ ಎನ್ನಪರಾಧ ಅನಂತ ಕ್ಷಮಿಸು ನೀ । ಮನ್ನಿಸದಿರ್ದರಾರಿಗೆ ಪೇಳ್ವೆನೊ ॥ ಓಂನಮೋ ಶ್ರೀಹರಿಯೆಂಬ ಪೂರ್ಣ ಜ್ಞಾನ। ವನ್ನು ಪುರಂದರವಿಠಲ ಎನ್ನಪ್ಪನೆ ॥ ೩ ॥ ಶ್ರೀಃ ॥

## ೧೭೩. ರಾಗ ಕಾಂಬೋಧಿ, ಝಂಪೆತಾಳ.

ಗರುವವ್ಯಾತಕೋ ನಿನಗೆ ಪಾಮರ ಮನುಜನೇ। ಧರೆಯೊಳಗೆ ಕುರು ಪತಿಗೆ ಸರಿಯೆನ್ನಬಹುದೇ ॥ ಪಲ್ಲ ॥ ಬಲದಲ್ಲಿ ಹಲಧರನೆ ಛಲದಲ್ಲಿ ರಾವಣನೆ । ಕುಲದಲ್ಲಿ ವಸಿಷ್ಠ ಗೌತಮನೆ ॥ ನೆಲೆಯಲ್ಲಿ ಭೃಗು ಮುನಿಯೆ ನೇಮದಲಿ ಗಾಂಗೇಯನೇ। ಒಲುಮೆಯ.ಲಿ ವಾಲ್ಮೀಕಿ ಮುನಿ ಯೇನೋ ನೀನು ॥ ೧ ॥ ಹಠದಲ್ಲಿ ಪ್ರಹಲ್ಲಾದನೇ ದಿಟದಲ್ಲಿ ಧ್ರುವ ರಾಯನೇ । ಶಠರೊಳಗೆ ವಿಶ್ವಾಮಿತ್ರನೇ ನೀನೂ ॥ ವಿಟರೊಳು ಮನ್ಮ. ಥನೇ ವೀರರೊಳು ಪಾರ್ಥನೆ। ಕುಟಿಲತನದಲ್ಲಿ ಶಕುನಿಯೋ ನೀನೂ ॥ ॥ ೨ ॥ ದಾನದೊಳು ಕರ್ಣನೇ ಗಾನದೊಳು ನಾರದನೆ। ಜ್ಞಾನದಲಿ ವ್ಯಾಸಶುಕಮುನಿಯೋ ನೀನೂ ॥ ದೀನ ರಕ್ಷಕ ನಮ್ಮ ಪುರಂದರ ವಿಠಲನ್ನ। ಧ್ಯಾನದೊಳು ಇದ್ದು ಭವನೀಗು ಮನುಜಾ ॥ ೩ ॥ ಶ್ರೀಃ ॥

## ೧೭೪. ರಾಗ ಮುಖಾರಿ, ಝಂಪೆತಾಳ.

ಆರೋಗಣೆಯ ಮಾಡೇಳಯ್ಯ ॥ ಪಲ್ಲ ॥ ಸರಸಿಜ ಭವಾಂಡದೊಳ್ ಮೇರು ಮಂಟಪದಿ । ಸುರದಿನಕರಾದೀಪ್ತಾಜ್ಯೋತಿಶ್ಚಕ್ರಾ ॥ ತರಣಿ ಮಂಡಲವ ಪೋಲುವ ರತುನದ ಹೊನ್ನ। ಹರಿವಾಣದಲ್ಲಿ ದೇವಿ ಬಡಿ

ಸಿದಳಯ್ಯಾ ॥ ೧ ॥ ಅಲ್ಲ ಹೇರಳೆ ನಿಂಬೆ ಮೆಣಸು ಯಾಲಕ್ಕಿ ಕಾಯ್ ।
ನೆಲ್ಲಿಯುಂಬಟಿಕಾಯಿ ಚಲುವಾ ಮಾಗಾಯಿ ॥ ಬಿಲ್ವಾಮಂಗ್ರಳಿ
ಸೊಂಡೆಚೆಲುವ ಪಾಪಟಿಕಾಯಿ । ಎಲ್ಲಾ ಧರಾದೇವಿ ತಾ ಬಡಿಸಿದ
ಳಯ್ಯಾ ॥ ೨ ॥ ಹಪ್ಪಳ ಸಂಡಿಗೆ ವಿವಿಧ ಶಾಕಂಗಳು । ತುಪ್ಪ ಸಕ್ಕರೆ
ಹಣ್ಣು ಫಲಗಳೂ ॥ ಕರ್ಪೂರ ಕಸ್ತೂರಿ ಬೆರಸಿದ ರಸಾಯನವ । ಒಪ್ಪಿಸಿ
ಶ್ರೀದೇವಿ ಬಡಿಸಿದಳಯ್ಯಾ ॥ ೩ ॥ ಎಣ್ಣೋರಿಗತಿರಸ ಬೆಲ್ಲ ಮಂಡಿ
ಗೆಯಾ । ಅನ್ನ ಪಾಲಿನ ಪರಮಾನ್ನಗಳು ॥ ಸಣ್ಣ ಶಾವಿಗೆಯು ಶಾಲ್ಯಾ
ನ್ನವನು ನಿಮಿಷದೊಳ್ । ಬಣ್ಣಿಸಿ ದುರ್ಗಾದೇವಿ ಬಡಿಸಿದಳಯ್ಯಾ ॥
॥ ೪ ॥ ನೀ ನಿತ್ಯ ತೃಪ್ತನಹುದು ನಿನ್ನುದರದೊಳ್ । ನಾನಾ ಜನರು
ಬಂದು ಉಣ್ಣಬೇಕು ॥ ಶ್ರೀನಾಥ ಗದುಗಿನ ವೀರನಾರಾಯಣ । ಅನಾಥ
ಬಂಧುವೆ ಪುರಂದರವಿಠಲ ॥ ೫ ॥ ಶ್ರೀಃ ॥

## ೧೭೫. ರಾಗ ಕಾಂಬೋಧಿ, ಆದಿತಾಳ.

ದೀನ ರಕ್ಷಕನೆ ನಿನ್ನಾ ಧ್ಯಾನವೇನೊ ವಿಠಲ । ಏನಾನಿತ್ತು ಮೆಚ್ಚಿ
ಸುವೆನೊ ನಿನ್ನಾ ವಿಠಲಾ ॥ ಪಲ್ಲ ॥ ಓದಿ ನಿನ್ನ ಮೆಚ್ಚಿಸುವೆನೊ
ವೇದವ ಅಜಗೆ ಇತ್ತೆ ॥ ಓದಿಸಿ ಮೆಚ್ಚಿಸುವೆನೊ ವರಶೇಷಶಯನ
ನಿನ್ನಾ ॥ ೧ ॥ ಪಾಡಿ ನಿನ್ನ ಮೆಚ್ಚಿಸುವೆನು ಪವನಜನ ಸ್ವಾಮಿ ನೀನೇ ॥
ಆಡಿಸಿ ಮೆಚ್ಚಿಸುವೆನೊ ಹರನಯ್ಯನಯ್ಯ ನಿನ್ನಾ ॥ ೨ ॥ ಚಿನ್ನವಿಟ್ಟು
ಮೆಚ್ಚಿಸುವೆನೊ ಶ್ರೀದೇವಿಯರಸನೆ ॥ ಪೂರ್ಣಾನಂದ ಸ್ವಾಮಿ ನೀನೆ
ಪುರಂದರವಿಠಲ ನಿನ್ನಾ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೭೬. ರಾಗ ಶಂಕರಾಭರಣ, ಝಂಪೆತಾಳ.

ವನಧಿಯನು ದಾಟಿ ದಾನವರ ದಂಡಿಸಿದೆ । ಹನುಮಂತದೇವ
ನಮೋ ॥ ಪಲ್ಲ ॥ ಅಂಜನೆಯ ಗರ್ಭ ಪುಣ್ಯೋದಯದಿ ಜನಿಸಿದೆ ।
ಕಂಜಸಖಮಂಡಲಕೆ ಕೈದುಡುಕಿದೆ ॥ ರಂಜಿಸೀರೇಳು ಜಗಂಗಳನೆಲ್ಲ

ನುರುಷಿ ಪ್ರ । ಭಂಜನಾತ್ಮಕ ನಿನಗೆ ಸರಿಯಾರು ಗುರುವೇ ॥ ೧ ॥ ಹೇಮಕುಂಡಲ ಹೇಮಯಜ್ಞೋಪವೀತ । ಹೇಮಧರ ಕಟಿಸೂತ್ರ ಕೌಪೀನಧರಾ ॥ ರೋಮ ಕೋಟಿಲಿಂಗ ಅಂಗ ಶ್ಯಾಮಲವರ್ಣ ॥ ರಾಮಭೃತ್ಯನೆ ನಿನಗೆ ಸರಿಯಾರು ಗುರುವೆ ॥ ೨ ॥ ರಾಮ ಲಕ್ಷ್ಮಣರಾ ಬಂಟನಾಗಿ ನಡದೆ । ಭೂಮಿಸುತೆಗುಂಗುರವನಿತ್ತು ಮೆರದೇ ॥ ಆ ಮಹಾ ಲಂಕಾಪುರವನೆಲ್ಲವ ಸುಟ್ಟು । ಧಾವಮಾಧೂಮ್ರವ ಮಾಡಿ ಮರಳಿದ ಮಹಾತ್ಮಾ ॥ ೩ ॥ ಅಕ್ಷಯಕುಮಾರಕನ ನೀ ತೂರಿ ಬಿಸಾಡಿ । ರಾಕ್ಷಸಾಧಿಪ ರಾವಣನ ರಣದೊಳು ॥ ವಕ್ಷಸ್ಥಳಕೆ ಗುದ್ದಿ ಮೂರ್ಛೆಗೊಳಿಸಿದ ಜಗ । ದ್ರಕ್ಷಕನೆ ಶಿಕ್ಷಕನೆ ಸರಿಯಾರು ಗುರುವೆ ॥ ॥ ೪ । ಶ್ರೀಮದಾಚಾರ್ಯ ನಮ ಕುಲದೈವನೆ ನೀನು । ಆ ಮಹಾಲ ಕುಮಿ ನಾರಾಯಣಾಖ್ಯ ॥ ರಾಮ ಪುರಂದರವಿಠಲರಾಯನಾ ನಿಜ ಶಿಷ್ಯ । ಶ್ರೀಮಧ್ವರೂಪನು ಹನುಮಂತನು ॥ ೫ ॥ ಶ್ರೀಃ ॥

## ೧೭೭. ರಾಗ ಸೌರಾಷ್ಟ್ರ, ಆದಿತಾಳ.

ನಿನ್ನ ಮಹಿಮೆಯನ್ನು ಪೊಗಳುವರೆ ಎನ್ನಳವಲ್ಲಾ ವಿಚಿತ್ರ ಚರಿತ್ರ ॥ ॥ ಪಲ್ಲ ॥ ಪಾಲುಗಡಲು ಮನೆಯಾಗಿರಲೂ ಒಂ । ದಾಲದೆಲೆಯ ಮೇಲೆ ಮಲಗುವರೇ ॥ ಮೂಲೋಕವು ನಿನ್ನ ಉದರದೊಳಿರುತಿರೆ । ಬಾಲಕನಾಗಿ ಯೆತ್ತಿಸಿಕೊಂಬಾರೆ ॥ ೧ ॥ ಸಿರಿ ನಿನ್ನ ಕೈವಶವಾಗಿರಲು ನೀ । ತಿರುವರೆ ಬಲಿಯಾಗಕ್ಕೆ ಪೋಗಿ ॥ ಸರಸಿಜೋದ್ಭವ ನಿನ್ನ ಪೂಜಿಸಲು ಒಬ್ಬ । ನರನ ಬಂಡಿಗೆ ಬೋವನಾಗುವರೇ ॥ ೨ ॥ ರಮ್ಮೆರಮಣ ನೀನಾಗಿರಲು । ಗಮ್ಮಾನೆ ಕುಬುಜೆಗೆ ಸೋಲುವರೆ ॥ ಬೊಮ್ಮನಯ್ಯನೆ ಪರಬೊಮ್ಮನೆಂದೆನಿಸುವ । ಕಮ್ಮಿದೇವರ ಗಂಡ ಪುರಂದರವಿಠಲಾ ॥ ೩ ॥ ಶ್ರೀಃ ॥

## ೧೭೮. ರಾಗ ಕಲ್ಯಾಣಿ, ಆದಿತಾಳ.

ಕ್ಷೀರಾಬ್ಧಿ ಕನ್ನಿಕೆ ಶ್ರೀಮಹಾಲಕುಮಿ । ಆರಿಗೆ ವಧುವಾಹೆ ಅಂಬುಜಾಕ್ಷೀ ॥ ಪಲ್ಲ ॥ ಶರಧಿ ಬಂಧದ ರಾಮಚಂದ್ರ ಮೂರುತಿಗೋ ।

ಪರಮಾತ್ಮ ಅನಂತ ಪದ್ಮನಾಭನಿಗೋ ॥ ಸರಸಿಜನಾಭ ಜನಾರ್ದನ ಮೂರುತಿಗೋ । ಎರಡು ಹೊಳೆಯ ರಂಗಪಟ್ಟಣವಾಸಗೋ ॥ ೧ ॥ ಚೆಲುವ ಮೂರುತಿ ಬೇಲೂರ ಚನ್ನಿಗರಾಯನಿಗೋ । ಕೆಳದಿ ಹೇಳು ಡುಪಿನ ಕೃಷ್ಣರಾಯಗೋ ॥ ಇಳೆಯೊಳು ಪಾಂಡುರಂಗ ನೆಲೆಯ ವಿಠಲೇಶಗೋ । ನಳಿನಾಕ್ಷಿ ಹೇಳು ಬದರಿ ನಾರಾಯಣನಿಗೋ ॥ ೨ ॥ ಮಲಯಜಗಂಧಿ ಬಿಂದುಮಾಧವರಾಯಗೊ । ಸುಲಭ ದೇವರು ಪುರುಷೋತ್ತಮಗೋ ॥ ಫಲದಾಯಕ ನಿತ್ಯ ಮಂಗಳ ನಾಯಕಗೋ । ಚೆಲುವೆ ನಾಚದೆ ಪೇಳು ಶ್ರೀವೆಂಕಟೇಶಗೋ ॥ ೩ ॥ ವಾಸವಾರ್ಚಿತ ಕಾಂಚಿ ವರದರಾಜನಿಗೋ । ಆ ಶ್ರೀಮುಷ್ಣದಧಿವರಾಹನಿಗೋ ॥ ಶೇಷಶಾಯಿಯಾದ ಶ್ರೀರಂಗನಾಯಕಗೊ । ಸಾಸಿರ ನಾಮದೊಡೆಯ ಅಳಗಿರೀಶಗೋ ॥ ೪ ॥ ಶರಣಾಗತರಕ್ಷಕ ಶಾರಂಗಪಾಣಿಗೋ। ವರಗಳನೀವ ಶ್ರೀನಿವಾಸನಿಗೋ॥ ಕುರುಕುಲಾಂತಕ ರಾಜಗೋಪಾಲ ಮೂರುತಿಗೋ । ಸ್ಥಿರವಾಗಿ ಪುರಂದರವಿಠಲರಾಯಗೋ ॥ ಆರಿಗೆ ವಧುವಾಹೆ ಅಂಬುಜಾಕ್ಷಿ ॥ ೫ ॥ ಶ್ರೀಃ ॥

## ೧೭೯. ರಾಗ ಧನಾಸಿ, ಆದಿತಾಳ.

ದೃಷ್ಟಿತಾಗಿತೆ ನಮ್ಮ ಕೃಷ್ಣರಾಯಗೆ ॥ ಪಲ್ಲ ॥ ಸೃಷ್ಟಿಯಲಿ ನಾರಿಯರು ಕಣ್ಣಿಟ್ಟು ಹೀರುವರು ಕಾಣೇ ॥ ಅನುಪಲ್ಲ ॥ ಬಿಟ್ಟ ಕಣ್ಣಾ ಮುಚ್ಚಲಿಲ್ಲ । ಮುಟ್ಟಗೊಡ ಬೆನ್ನಮುಳ್ಳಾ ॥ ಇಷ್ಟ ಗಂಟಲೊಳು ಗುರು । ಗುಟ್ಟಿ ಗುಟ್ಟೀತೇನಮ್ಮಾ ॥ ೧ ॥ ತೆರದ ಬಾಯಾ ಮುಚ್ಚಲಿಲ್ಲಾ । ಕಿರಿದಾಯಿತು ತನುವಿದೆಲ್ಲಾ ॥ ಭರದಿ ಪೆತ್ತ ತಾಯ ಕಂಡರೆ । ಶೇರಲೊಲ್ಲಾನೆ ॥ ೨ ॥ ಅನ್ನವನು ಉಣಲಿಲ್ಲ । ಎನ್ನ ಮನೆ ಬೆಣ್ಣೆಯೆಲ್ಲಾ । ಚೆನ್ನ ವಸ್ತ್ರ ಹೊದಿಸಲು । ತಾನೊಲ್ಲನೆ ॥ ೩ ॥ ರಾಜರಾಜರಲ್ಲಿ ತೇಜಿ । ಮಾಜಿ ರಥವ ನಡಿಸಿ ॥ ಮಾಜಿ ವಾಜಿಯನ್ನು ಮತ್ತು । ಎಂದರೆ ಯಾಕೆ ವಲ್ಲನೆ ॥ ೪ ॥ ಅರಿತವರ್ಯಾರು ಮಂತ್ರತಂತ್ರ । ಕರದು ಭಸಿತ ಹಾಕಿರಮ್ಮಾ ॥ ಧರೆಯೊಳು ಪುರಂದರವಿಠಲನ । ಸ್ಮರಣೆ ಮಾಡಿದರಿಂದಾ ॥ ೫ ॥ ಶ್ರೀಃ ॥

೧೮೦. ರಾಗ ಸೌರಾಷ್ಟ್ರ, ಅಟತಾಳ.

ದಾರವುಗನೆ ಯಲೆ ಗೋಪಿ । ದಾರವುಗನೆ । ಪರಳಾನೆಳೆಯುತಂಜಿ ಗಾಲನಿಕ್ಕುತಾ ಬಹವಾ ॥ ಪಲ್ಲ ॥ ಕಿರುಜಡೆ ಮುಂಗುರುಳು ಅರಳೋಲೆ ಮಾಗಾಯಿ ॥ ಹಾರ ಹೀರ ಕೌಸ್ತುಭ ಸರವಾ ಹಾಕಿದನಿವ ॥ ೧ ॥ ಕೊರಳಾ ಹುಲಿಯುಗುರು ಶ್ರೀಗಂಧಾ ತುಳಸಿ ॥ ಸುರರಾ ಸೋಲಿಪ ಮುದ್ದು ಸುರಿದು ನಲಿದಾಡುವಾ ॥ ೨ ॥ ಕರುಣಾಕರ ವರದ ಪುರಂದರ ವಿಠಲಾ ॥ ವರ ಭಾಗವತರ ಕೇರಿಯೊಳ್ ನಲಿದಾಡುವಾ ॥ ೩ ॥ ಶ್ರೀಃ ॥

॥ ಶ್ರೀಸುಧ್ವೇಶಾರ್ಪಣಮಸ್ತು ॥

೧೮೧. ರಾಗ ಕಾಪಿ, ಅಟತಾಳ.

ಕಾಯಬೇಕೆನ್ನ ಗೋಪಾಲಾ । ಒಂದು । ಪಾಯವನರಿಯೆನು ಭಕ್ತರ ಪಾಲಾ ॥ ಪಲ್ಲ ॥ ಹಲವು ಜನ್ಮಗಳೆತ್ತಿ ಬಂದೇ । ಮಾಯ । ಬಲ ವೆಂಬೊದರಿಯಾದೆ ಭವದೊಳು ನೊಂದೇ ॥ ಒಲಿದು ಭಯವಾಯಿತು ಮುಂದೇ । ನೀನು । ಸುಲಭನೆಂದು ಕೇಳಿ ಶರಣೆಂದು ತಂದೇ ॥ ೧ ॥ ಚಿತ್ತದೊಳಗೆ ಮನವಿಟ್ಟು । ನಿನ್ನ । ಉತ್ತಮ ನಾಮದ ಸ್ಮರಣೆಯ ಬಿಟ್ಟು ॥ ನ್ಮತ್ತನಾಗಿ ಮತಿಗೆಟ್ಟು । ಇದು । ಚಿತ್ತದೊಳಗೆ ತಿಳಿದು ಬಲು ದಯವಿಟ್ಟು ॥ ೨ ॥ ಈ ರೀತಿ ಪಾಪಗಳೆಲ್ಲಾ । ಅನ್ಯ । ನರರೇನು ಅರಿವಾರು ಯಮಧರ್ಮ ಬಲ್ಲಾ ॥ ನರಕಕ್ಕೆ ಒಳಗಾದೆನಲ್ಲಾ । ಸಿರಿ । ವರ ನಾರಾಯಣ ಪುರಂದರವಿಠಲ್ಲಾ ॥ ೩ ॥ ಶ್ರೀಃ ॥

೧೮೨. ರಾಗ ಧನಾಸಿ, ಆದಿತಾಳ.

ಮನ್ಮಥ ಜನಕನ ಮರೆತ ಮನುಜರು ಮರ ಮರ ಮರ ಮರಾ ಮರಾ । ಚಿನ್ಮಯ ರೂಪನ ಚಿಂತಿಸದವನು ಛಿ ಛಿ ಛಿ ಛಿ ಛೀ ಮನುಜ ॥ ॥ ಪಲ್ಲ ॥ ಸುರರಿಂ ವಂದ್ಯನ ಸುತ್ತದ ಕಾಲು ಸೂಳೆಮನೆ ಮಂಚದ ಕಾಲು ॥ ಉರಗ ಶಯನನ ನುಡಿಯದ ನಾಲಿಗೆ ಉಡುವಿನ ನಾಲಿಗೆಯೂ ॥ ೧ ॥ ನಾರಾಯಣನ ಕಥೆ ಕೇಳದ ಕಿವಿ ಸೋರುವ ಮಾಳಿಗೆ

ನಾಳಗಳು ॥ ಸರಸಿಜನಾಭನ ಯಿತ್ತದ ಹೆಗಲು ಸತ್ತ ಕುರಿಯ ಹೆಗಲು ॥ ॥ ೨ ॥ ಹರಿ ನೈವೇದ್ಯ ಉಣ್ಣದ ಬಾಯಿ ಹಂದಾಡುವ ಹಾವಿನ ಹೋರು ॥ ನರಹರಿ ರೂಪನ ನೋಡದ ಕಣ್ಣು ನವಿಲು ಗರಿಯ ಕಣ್ಣು ॥ ೩ ॥ ಕರಿವರದನಾ ಪೂಜಿಸದ ಕರಗಳು ದಾರಿಯ ತೋರುವ ಮರದ ಕೈಗಳು ॥ ಗರುಡಗಮನಗೆ ನಮಿಸದ ಶಿರವು ಉರಗನ ವಿಷತಲೆಯೂ ॥ ೪ ॥ ಮಂಗಳ ಮೂರ್ತಿಯ ಪಾಡದ ಕಂಠ ಒಡೆದು ಹೋದ ಹರವಿನ ಕಂಠಾ ॥ ರಂಗ ಪುರಂದರವಿಠಲನ ಮರೆತವ ರಜಕನ ಮನೆ ಕತ್ತೆಯೋ ನಿಜವೂ ॥ ೫ ॥ ಶ್ರೀಃ ॥

## ೧೮೩. ರಾಗ ಪೂರ್ವಿ, ಅಟತಾಳ.

ಬಂದಾನು ಯಮನು । ದುಷ್ಟರ ಕೊಂದಾನು ಯಮನು ॥ ಪಲ್ಲ ॥ ಕೆರೆಭಾವಿ ಕಟ್ಟುವರಿಲ್ಲಿ । ದೊಡ್ಡ । ಧೊರೆತನವಾಳುವರಲ್ಲಿ ॥ ಕರದನ್ನ ಇಕ್ಕುವರಿಲ್ಲಿ । ಸಿರಿ ಸಂಪನ್ನರಾಗಿಹರಲ್ಲಿ ॥ ೧ ॥ ಗಂಡನ ಬೈಯುವರಿಲ್ಲಿ । ಯಮ । ದಂಡ ಹೊರಿಸುವರಲ್ಲಿ । ಉಂಡಮನೆ ಕೊಂಬರಿಲ್ಲಿ । ಯಮ । ಕೊಂಡಕ್ಕೆ ನೂಕುವರಲ್ಲಿ ॥ ಪರಸತಿ ಕೂಡುವರಿಲ್ಲಿ । ಉರಿ ಕಂಬ ತೆಕ್ಕೆಸುವರಲ್ಲಿ ॥ ಪಂಭೇದಪಂಕ್ತಿಗಳಿಲ್ಲಿ । ಪರಿ । ಪರಿಯ ಭಂಗಗಳಲ್ಲಿ ॥ ೩ ॥ ತಾಯ್ತಂದೆ ಸೇವೆಗಳಿಲ್ಲಿ । ಸುರರೆಲ್ಲ ಮೆಚ್ಚುವರಲ್ಲಿ ॥ ಗುರುಗಳ ಉಪದೇಶವಿಲ್ಲಿ । ಗುರು । ಮರುತರು ತೋಷಿಪರಲ್ಲಿ ॥ ೪ ॥ ದಾನಧರ್ಮಗಳಿಲ್ಲಿ । ಸು । ಖಾನುಭೋಗ ಮೋಕ್ಷದಲ್ಲಿ ॥ ಧ್ಯಾನಮಾಡುವದಿಲ್ಲಿ । ಪುರಂ । ದರವಿಠಲನ ಕಾಣ್ಬದಲ್ಲಿ ॥ ೫ ॥ ಶ್ರೀಃ ॥

## ೧೮೪. ರಾಗ ಕಲ್ಯಾಣಿ, ಅಟತಾಳ.

ಏನ ಹೇಳಲಿ ನಾನು । ಕೃಷ್ಣನ ಮಹಿಮೇ । ಯಾರಿಗೂ ತಿಳಿಯದಮ್ಮ ॥ ಪಲ್ಲ ॥ ಭೂಮಿಯೊಳಗೆ ಜ್ಞಾನವಂತರಿಗಲ್ಲದೆ ॥ ಅನುಪಲ್ಲ ॥ ಹೊತ್ತಾರೆದ್ದು ಕೂತಿರಲು । ಯಶೋದೆ । ಮುತ್ತು ಪೋಣಿಸುತಿದ್ದಳು । ಹತ್ತಿರಿದ್ದ ಕೃಷ್ಣ ಬಂದು ಒಂದು ॥ ಮುತ್ತು ತೆಗೆದುಕೊಂಡು ಸುತ್ತಲಿದ್ದ

ಹುಡುಗರು ಸಹಿತ। ಹಿತ್ತಲೊಳಗೆ ಬಿತ್ತಿ ಹೋದನು ॥ ೧ ॥ ಪರಿಪರಿ ಚಿಂತೆಯಿಂದ ಯಶೋದೆ ನಾರಿ। ಯಾರ ಕಳುಹಿದಳು ಸಂದುಸಂದಿಗೆ ಹುಡುಕಿ ಹುಡುಕಿ ಕಂದ ಕಾಣನೆಂದು ಬರಲು। ಒಂದು ಕ್ಷಣದಲ್ಲಿ ಕೃಷ್ಣ ಬಂದು ಎದುರಾಗಿ ನಿಂದ ॥ ೨ ॥ ಕಂದಯ್ಯನ ಕರಪಿಡಿದು ಯಶೋದೆ ಕರ। ತಂದಾಳರಮನೆಗೆ ॥ ಕಂದ ಬಹಳ ಹಸಿದಿಹ ತಾ। ನೆಂದು ತುತ್ತ ಮಾಡಿ ಉಣಿಸಿ ॥ ತಂದ ಮುತ್ತಾನೇನು ಮಾಡಿದಿ। ಯೆಂದು ಸಿಟ್ಟಿನಿಂದ ಕೇಳಿದಳು ॥ ೩ ॥ ಹೆತ್ತ ತಾಯ ಕರಪಿಡಿದು ಕೃಷ್ಣಯ್ಯ । ಹಿತ್ತಲೊಳಗೆ ಮುತ್ತಿನ ಗಿಡ ತೋರಿದ ॥ ಪಂಟಿಪಂಟಿಗೆ ಎಂಟು ಎಂಟು ಗೊಂಚು ಗೊಂಚಲು ಜೋಲುತಿರಲು। ಕಡಿದು ಕಡಿದು ರಾಶಿಹಾಕಿದ ನಮ್ಮ ಪರಮ ಪುರಂದರವಿಠಲ ॥ ೪ ॥ ಶ್ರೀಃ ॥

೧೮೫. ರಾಗ ಸಾವೇರಿ, ತ್ರಿಪುಟತಾಳ.

ಏಕಿಂತೆ ಯಾತಕೊ ಯೆನಗೆ ಅನಂತಕೋಟಿ । ಎಂತು ನಿನ್ನ ಪೂಜೆಗಳ ಮಾಡುವದಯ್ಯಾ ॥ ಪಲ್ಲ ॥ ಪವಿತ್ರೋದಕದಿ ಪಾದಪೂಜೆಯ ಮಾಡೇನೆಂದರೆ । ದೇವಗಂಗೆಯು ನಿನ್ನಾ ಪಾದೋದಕಾ ॥ ನವಕುಸುಮವಾ ತಂದು ಸಮರ್ಪಿಸುವೆನೆಂದರು। ಧ್ಬವಿಸಿದೆ ಪೂವು ನಿನ್ನ ಪೊಕ್ಕಳೊಳಗೆ ॥ ೧ ॥ ದೀಪವ ಬೆಳಗುವೆನೆ ನಿನ್ನ ಕಂಗಳು ಸಪ್ತ। ದ್ವೀಪಂಗಳನೆಲ್ಲವ ಬೆಳಗುತ್ತಿರೆ ॥ ಆಪೋಶನೆ ಮಾತ್ರವ ಕೊಡುವೆನೆಂದರೆ ನಿನಗೆ। ಆಪೋಶನಕೀಡೇರದಾಯಿತಯ್ಯಾ ಅಂಬುಧಿ ॥ ೨ ॥ ಕಾಣಿಕೆಯಾ ನಿತ್ತಾದರು ಕೈಯ ಮುಗಿವೆನೆಂದರೆ । ರಾಣಿವಾಸಿಯು ಸಿರಿದೇವಿ ನಿನ್ನೊಳು ॥ ಮಾಣದೆನ್ನಾ ಮನದೊಳು ಇದ್ದೂ ನೀ ಅನುಗಾಲ। ಪ್ರಾಣಧಾರನಾಗಿರಯ್ಯ ಪುರಂದರವಿಠಲಾ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೧೮೬. ರಾಗ ಜುಂಜೋಟಿ, ರೂಪಕತಾಳ.

ರಾಮ ರಾಮ ರಾಮ ರಾಮ ಸೀತಾರಾಮ ಎನ್ನಿರೋ ॥ ಪ್ರೇಮದಿಂದ ಭಜಿಸಿ ಅವನ ಮುಕ್ತಿಪಡೆಯಿರೋ ॥ ಪಲ್ಲ ॥ ಭರದಿ ಯಮುನ

ಭಟರು ಬಂದು । ಹೊರಡು ಎಂದು ಪೆಟ್ಟಿ ತುಳಿಯೆ ॥ ಕೊರಳಿಗಾತ್ಮ ಸೇರುವಾಗ । ಹರಿಯ ಧ್ಯಾನವೊದಗದಯ್ಯ ॥ ೧ ॥ ಇಂದ್ರಿಯಂಗಳೆಲ್ಲ ಕೂಡಿ । ಬಂದು ತನುವ ಮುಸುಕುವಾಗ ॥ ಸಿಂಧುಸುತೆಯ ಪತಿಯ ಧ್ಯಾನ । ವಂದಿಗೊದಗಿ ಬಾರದಯ್ಯ ॥ ೧ ॥ ಶ್ವಾಸ ಕಫವೆರಡು ಕಂಠ । ದೇಶದಲ್ಲಿ ನರಳಿ ಬಳಲಿ ॥ ವಾಸುದೇವ ಕೃಷ್ಣ ಎಂದು । ಆ ಸಮಯ ಕೊದಗದಯ್ಯ ॥ ೩ ॥ ಶೃಂಗಾರದ ದೇಹವೆಲ್ಲ । ಅಂಗ ಮುರಿದು ಬೀಳು ವಾಗ ॥ ಕಂಗಳಿಗೆ ಕೈಸೇರುವಾಗ । ರಂಗನ ಧ್ಯಾನವೊದಗದಯ್ಯ ॥ ೪ ॥ ಕೆಟ್ಟ ಜನ್ಮದಲ್ಲಿ ಹುಟ್ಟಿ । ದುಷ್ಟಕರ್ಮ ಮಾಡಿ ದೇಹ ॥ ಬಿಟ್ಟು ಹೋಗು ವಾಗ ಪುರಂದರ । ವಿಠಲನ್ನ ನೆನೆಯಿರಯ್ಯ ॥ ೫ ॥ ಶ್ರೀಃ ॥

೧೮೭. ರಾಗ ಧನಾಸಿ, ಆದಿತಾಳ.

ಧರ್ಮಶ್ರವಣವಿದೇತಕೆ । ಮೂರ್ಖಗೆ । ಧರ್ಮಶ್ರವಣವಿದೇತಕೆ ॥ ॥ ಪಲ್ಲ ॥ ಕರ್ಮಾನುಷ್ಠಾನವನೆಸಗದಿರುವ । ದುರ್ಮತಿಗೇತಕೆ ಬ್ರಾಹ್ಮ ಣಜನ್ಮ ॥ ಅನುಪಲ್ಲ ॥ ಕೋಣಗೆ ವೀಣಾಗಾನವಿದೇತಕೆ । ಮಾಣಿಕ್ಯ ವೇತಕೆ ಮರ್ಕಟಗೆ ॥ ಪ್ರಾಣವು ತೊಲಗಿದ ಹೆಣ್ಣಿಗಿದೇತಕೆ ಕ । ಟ್ಟಾಣಿ ಮುತ್ತಿನ ಹಾರವು ಕೊರಳಿಗೆ ॥ ೧ ॥ ಷಡುರಸ ಅನ್ನವಿದೇತಕೆ ಗರ್ದಭ । ಒಡುಗೊರೆ ಸಹಿತಲೆ ಶ್ವಾನನಿಗೆ ॥ ಕಡುವೃದ್ಧಗೆ ಪ್ರೈನೆರದ ಹೆಣ್ಣಿನ । ಒಡನೆ ಭೋಗಿಪೆನೆಂಬಭಿಲಾಷೆಯೇಕೆ ॥ ೨ ॥ ಹುಟ್ಟು ಕುರುಡಗೆ ದೀಪ ವಿದೇತಕೆ । ಭ್ರಷ್ಟನಿಗೇತಕೆ ಕುಲಧರ್ಮ ॥ ಸೃಷ್ಟಿಯೊಳಧಮಗೆ ಪುರಂದ ರವಿಠಲನ । ಮುಟ್ಟಿ ಭಜಿಪೆನೆಂಬಭಿಲಾಷೆಯೇತಕೆ ॥ ೩ ॥ ಶ್ರೀಃ ॥

೧೮೮. ರಾಗ ಶಂಕರಾಭರಣ, ರೂಪಕತಾಳ.

ಮರೆಯಬೇಡ ಮನವೆ ನೀನು । ಹರಿಯ ಚರಣವಾ । ಅರುಣಕಿರಣ ಚರಣ ಶರಣ ಪಾತಕ ಪಾವನ ॥ ಮರೆಯಬೇಡ ಮನವೆ ॥ ಪಲ್ಲ ॥ ಸಾಧುಸಜ್ಜನ ಸಂಗವ ಮಾಡಿ । ವೇದಶಾಸ್ತ್ರವ ಓದು ನೀ ॥ ಮೋದ ದಿಂದಲಿ ವೇದಗಮ್ಯನ । ಪಾದಪಂಕಜ ಧ್ಯಾನಿಸೊ ॥ ೧ ॥ ಸತಿಯು ಸುತರು ಗತಿಯು ಎಂದು । ಮತಿಯು ಕೆಟ್ಟು ತಿರುಗಬೇಡ ॥ ಮತಿಯು

ಕೆಟ್ಟು ಹೋದ ಮೇಲೆ। ಸತಿಯು ಸುತರು ಬರುವರೇನು॥ ೨॥ ಮಾನುಷ ಜನ್ಮ ದುರ್ಲಭವಿದು। ಮಾಧವನ ಕೃಪೆಯಲಿ ಬಂದಿದೆ॥ ಹೀನಜನರ ಕೂಡಿ ನೀನು। ಹಾನಿ ಮಾಡಿಕೊಳಲು ಬೇಡ॥ ೩॥ ಪಂಥ ಪಗಡೆ ಯಾಡಿ ನೀನು। ವ್ಯರ್ಥ ಕಾಲ ಕಳೆಯಬೇಡ॥ ಅಂತಕನ ದೂತರಿಗೆ। ಲೇಶ ಕರುಣವಿಲ್ಲವಯ್ಯ॥ ೪॥ ಯಾಗ ಯಜ್ಞ ಮಾಡಲೇಕೆ। ಯೋಗಿ ಯತಿಯು ಆಗಲೇಕೆ॥ ನಾಗಶಯನ ನಾರದವಂದ್ಯನ। ಕೂಗಿ ಭಜನೆ ಮಾಡು ಬೇಗ॥ ೫॥ ಗೋಪುರದ ಗೊಂಬೆಯಂತೆ। ಗ್ರಾಮ ಗೃಹ ರಕ್ಷಿಪೆನೆಂದು॥ ತಾಪ ಪಡುತ ಹಗಲು ಇರುಳು। ತಾಮಸಜನರ ಕೂಡದೇ॥ ॥ ೬॥ ಹರಿಯ ಸ್ಮರಣೆ ಮಾತ್ರದಿಂದ। ಘೋರ ದುರಿತವೆಲ್ಲ ನಾಶ॥ ವರದ ಪುರಂದರವಿಠಲನ। ನಿರತ ಭಜನೆ ಮಾಡು ಬೇಗ॥ ೭॥

## ೧೪೯. ರಾಗ ಸೌರಾಷ್ಟ್ರ, ಅಟತಾಳ.

ಬಾರೆ ಗೋಪ್ಯಮ್ಮ ನಿಮ್ಮ ಬಾಲಕನಳುತಾನೆ। ಬಾರೆ ಗೋಪ್ಯಮ್ಮ॥ ಯಾರು ತೂಗಿದರೂ ನಿಲ್ಲನು ಮುರಹರಿ। ಬಾರೆ ಗೋಪ್ಯಮ್ಮ॥ ೧॥ ನೀರೊಳಗಾಡಿ ಮೈಯೊರೆಸೆಂದಳುತಾನೆ। ಬಾರೆ ಗೋಪ್ಯಮ್ಮ॥ ಮೇರುವ ಹೊತ್ತು ಮೈಭಾರವೆಂದಳುತಾನೆ। ಬಾರೆ ಗೋಪ್ಯಮ್ಮ॥ ೨॥ ಧರೆಯ ನೆಗಹಿ ದಾಡೆ ನೊಂದಿತೆಂದಳುತಾನೆ। ಬಾರೆ ಗೋಪ್ಯಮ್ಮ॥ ದುರುಳಾ ರಕ್ಕಸನ ಕರುಳ ಕಂಡಳುತಾನೆ। ಬಾರೆ ಗೋಪ್ಯಮ್ಮ॥ ೩॥ ನೆಲವನಳೆದು ತಾನು ಬೆರಳು ನೊಂದಳುತಾನೆ। ಬಾರೆ ಗೋಪ್ಯಮ್ಮ॥ ಛಲದಿಂದ ಕೊಡಲಿಯ ಪಿಡಿದು ಕೊಂಡಳುತಾನೆ। ಬಾರೆ ಗೋಪ್ಯಮ್ಮ॥ ॥ ೪॥ ಬಲು ಕಪಿಗಳ ಕಂಡು ಸತಿಗಾಗಿ ಅಳುತಾನೆ। ಬಾರೆ ಗೋಪ್ಯಮ್ಮ॥ ನೆಲವಿನ ಬೆಣ್ಣೆಯು ನಿಲುಕದೆಂದಳುತಾನೆ। ಬಾರೆ ಗೋಪ್ಯಮ್ಮ॥ ೫॥ ಬತ್ತಲೆ ನಿಂತಿಹ ಎತ್ತಿಕೊಳ್ಳೆಂದಳುತಾನೆ। ಬಾರೆ ಗೋಪ್ಯಮ್ಮ॥ ಉತ್ತಮ ತೇಜಿಯ ಹತ್ತಿಕೊಂಡಳುತಾನೆ। ಬಾರೆ ಗೋಪ್ಯಮ್ಮ॥ ೬॥ ಮತ್ತಾರು ತೂಗಲು ಮಲಗಲೊಲ್ಲನು ಶೌರಿ। ಬಾರೆ ಗೋಪ್ಯಮ್ಮ॥ ಎತ್ತಿಕೊಳ್ಳಮ್ಮ ಶ್ರೀಪುರಂದರವಿಠಲನ್ನ। ಬಾರೆ ಗೋಪ್ಯಮ್ಮ॥ ೭॥

## ೧೯೦. ರಾಗ ಕಲ್ಯಾಣಿ, ಅಟತಾಳ.

ಧರ್ಮ ದೊರಕೊಂಬುವದೆ ಸಜ್ಜನರಿಗೆ ದು । ಷ್ಕರ್ಮ ಸತಿಯುರುಳ್ಳ ಪುರುಷೋತ್ತಮರಿಗೆ ॥ ಪಲ್ಲ ॥ ಧನವಿದ್ದರೇನಯ್ಯ ಮನವಿಲ್ಲದವರಿಗೆ । ಮನವಿದ್ದರೇನಯ್ಯ ಧನವಿಲ್ಲವೂ ॥ ಧನವೂ ಮನವೂ ಎರಡುಳ್ಳ ಪುರುಷರಿಗೆ । ಅನುಕೂಲವಾದಂಥ ಸತಿಯಿಲ್ಲವಯ್ಯ ॥ ೧ ॥ ನಿನ್ನ ಕಣ್ಣ ಮುಂದೆ ಹೋಗುವ ಜೀವನು । ಇನ್ನು ನಿನಗೆ ನಾಚಿಕೆಯಿಲ್ಲವೂ ॥ ಎನ್ನದು ತನ್ನದು ಎಂಬ ಭ್ರಾಂತಿಯ ಬಿಟ್ಟು । ಇನ್ನೀದೇಹವ ನಂಬಿ ಕೆಡಬೇಡ ಮನುಜ ॥ ೨ ॥ ಈಗ ಮಾಡುವ ಧರ್ಮ ನಾಳೆ ಎಂದೆನಬೇಡ। ನೀವಾರು ನಾವಾರು ಎಲೆ ಮನುಜ ॥ ಊಳಿಗದವರೆಂಬ ಭಟರು ಬಂದೆಳೆವಾಗ । ನಾಳೆ ಮಾಳ್ಪೆನೆನೆ ಬಿಡುವರೆ ಮನುಜ ॥ ೩ ॥ ಎಂದೆಂದು ಈಪರಿ ಅಲ್ಲಲ್ಲಿ ಬಳಲಿಕೆ । ಮುಂದೆ ಕಾಣೆನು ಸಾಧನವನು ॥ ತಂದೆ ಶ್ರೀಪುರಂದರವಿಠಲರಾಯನ । ಒಂದು ಸಾರೆಯು ನೀ ನೆನೆ ಕಂಡ್ಯ ಮನುಜ ॥ ೪ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೯೧. ರಾಗ ಸೌರಾಷ್ಟ್ರ, ಅಟತಾಳ.

ಗಂಗಾದಿ ಸಕಲ ತೀರ್ಥದ ಫಲವೀವ್ಪೋದು । ಹರಿಯ ನಾಮಾ ॥ ಹಿಂಗದೆ ಜನರಿಗೆ ಮಂಗಳವೀವ್ಪೋದು । ಹರಿಯ ನಾಮಾ ॥ ೧ ॥ ಸ್ನಾನಜಪಂಗಳ ಸಾಧಿಸದವನಿಗೆ । ಹರಿಯ ನಾಮಾ ॥ ಜ್ಞಾನವೆಂದರಿಯದಾ ಮೂಢಾತ್ಮ ಮನುಜಗೆ । ಹರಿಯ ನಾಮಾ ॥ ೨ ॥ ವೇದ ಶಾಸ್ತ್ರಂಗಳನೋದದ ಮನುಜಗೆ । ಹರಿಯ ನಾಮಾ ॥ ಮಾಧವನ ಪೂಜೆಯಾ ಮಾಡದ ಮನುಜಗೆ । ಹರಿಯನಾಮಾ ॥ ೩ ॥ ವೇಳೆವೇಳೆಗೆ ಸ್ಮರಿಸುತ್ತಲಿರುವದು । ಹರಿಯ ನಾಮಾ ॥ ಜಾಳಿಗೆ ಹೊನ್ನು ಮನೆಯಾ ನೆಚ್ಚದೆ ಪೇಳಿ । ಹರಿಯ ನಾಮಾ ॥ ೪ ॥ ಸಾಧಿಸುವಗೆ ಪರಗತಿಯ ನೀಯುವದು । ಹರಿಯ ನಾಮಾ ॥ ಶೋಧಿಸಿ ಇಟ್ಟ ಚಿನ್ನದ ಗಟ್ಟಿ ಕಾಣಿರೋ । ಹರಿಯ ನಾಮಾ ॥ ೫ ॥ ಕಾಲನವರು ಬಂದು ಕರೆಯುದಲೀ

ಮುನ್ನ ಹರಿಯ ನಾವಮಾ ॥ ಹೇಳಿ ಶ್ರೀಪುರಂದರವಿಠಲನೊಲುಮೆಗೆ । ಹರಿಯ ನಾವಮಾ ॥ ೬ ॥ ಶ್ರೀಃ ॥

## ೧೯೨. ರಾಗ ಸಾವೇರಿ, ಅಟತಾಳ.

ಯಾರಿಗೆ ದೂರುವೆನೂ । ಗಿರಿರಾಯ । ಯಾರೆನ್ನ ಸಲಹವರೂ ॥ ॥ ಪಲ್ಲ ॥ ಸಾರಿದ ಭಕ್ತ ಸಂಸಾರಿ ನಿನ್ನಯ ಪಾದ । ವಾರಿಜವನು ತೋರಿ ಕಾರುಣ್ಯವೆನಗೀಯೊ ॥ ಅನುಪಲ್ಲ ॥ ಕಷ್ಟ ಜನ್ಮದಿ ಬಂದೆನೂ । ಧಾರುಣಿಯೊಳು । ದುಷ್ಟರಿಂದಲಿ ನೊಂದೆನೂ ॥ ನಿಷ್ಠೂರ ಬೇಡವೊ ನಿನ್ನ ನಂಬಿದ ಮೇಲೆ। ಸೃಷ್ಟಿಗೊಡೆಯನೆನ್ನ ಬಿಟ್ಟು ಕಳೆಯಬೇಡ ॥ ೧ ॥ ಹಿಂದೆ ಮಾಡಿದ ಕರ್ಮವೂ । ಈ ಭವದೊಳು । ಮುಂದಾಗಿ ತೋರುತಿದೆ ॥ ಇಂದಿಲ್ಲ ಗತಿಯದರಿಂದ ನೊಂದೆನು ನಾನೂ । ಮಂದರಧರ ಗೋವಿಂದ ನೀನಲ್ಲದೇ ॥ ೨ ॥ ಹಗಲು ಕತ್ತಲೆ ಸುತ್ತಿಯೇ । ಕಂಗೆಡಿಸುತ್ತ । ಹಗೆಯೊಳು ನಗಿಸುತ್ತಿದೇ ॥ ಉಗುರಿನಸಿಗಿಗೆ ಮುಳ್ಳುಗಳೀಗ ನೆಟ್ಟವು । ಸೊಗಸು ಹಾರಿಸಿ ಯೆದೆ ಧಿಗಿಲುಗೊಳಿಸುತಿದೆ ॥ ೩ ॥ ಬಾಡಿದ ಅರಳಿಯನೂ । ಕಲ್ಲಿನ ಮೇಲೆ । ಈಡಾಗಿ ನಾಟಿದರೆ ॥ ಬೇಡಿಕೊಂಡರೆ ತಳಿರ ಮೂಡಿ ಬರುವದುಂಟೆ । ರೂಢಿಗೊಡೆಯ ನೀನು ನೋಡದಿದ್ದ ಮೇಲೆ ॥ ೪ ॥ ಹಲವು ಪರಿಯ ಕಷ್ಟವಾ । ನಿನ್ನಯ ಪಾದಾ । ಜಲಜದ ಕರುಣಾದಲೀ ॥ ಸುಲಿಗೆಗೊಟ್ಟೆನು ನಾನು ಸೂರೆಗಾರರಿಗೆಲ್ಲ । ವಲವಾಗು ಯೆನ್ನೊಳು ಪುರಂದರವಿಠಲಾ ॥ ೫ ॥ ಶ್ರೀಃ ॥

## ೧೯೩. ರಾಗ ಮಧ್ಯಮಾವತಿ, ಏಕತಾಳ.

ಇಂದೂ ನಾನೇನು ಸುಕೃತವಾ ಮಾಡಿದೆನೋ । ಮಂಗಳಮಹಿಮಾ ವೆಂಕಟ ಬಂದ ಮನೆಗೆ ॥ ಪಲ್ಲ ॥ ಹಾರಾಕೇಯೂರ ಹೊನ್ನುಂಗುರ ಬೆರಳಾ । ಹಾರಾದ ನಡುವೆ ಹಾಕಿದೆ ಏಳು ಪದಕಾ ॥ ಘೋರಾ ಮುತ್ತಿನ ಕಂಠಮಾಲೇ ಮಾಲಿಕೆಯಾ । ಮೇಲು ಗಿರಿಯ ವೆಂಕಟ ಬಂದ ಮನೆಗೇ ॥ ೧ ॥ ಎಸಳೂ ಸುತ್ತಿದ ಪಟ್ಟೆ ಯೆಸೆವ ಕಸ್ತೂರಿಯೂ ।

ಹಸನಾ ಸಣ್ಣನಾಮ ಸಾಧೂತಿಲಕವೂ ॥ ಕುಸುಮಾ ಮಲ್ಲಿಗೆ ಜಾಜಿ ಯೆಸೆವಾ ಸಂಪಿಗೆಯೂ । ವಸುಧೇಶ ಸೊಬಗಾ ವೆಂಕಟ ಬಂದ ಮನೆಗೆ ॥ ೨ ॥ ಬಿಗಿದೂ ಸುತ್ತಿದ ವೋಲೆ ಬಿಡುಮುತ್ತಿನೊಂಟೇ । ಬಗೆ ಬಗೆಯುಂಗುರ ಧಗಧಗಿಸುತಲೀ ॥ ಅಗಣಿತ ಹಸ್ತಾ ಕಂಕಣ ಹೊಳೆವು ತಲೀ । ಜಗದೊಳಗಧಿಕನು ವೆಂಕಟ ಬಂದ ಮನೆಗೇ ॥ ೩ ॥ ಪಿಡಿದಾ ಸುದರ್ಶನ ಎಡಗೈಯ ಶಂಖಾ । ಪಿಡಿದಿದ್ದ ಖಡ್ಗಾದಿ ಜಡರಾ ಮರ್ದಿಸುತಾ ॥ ಉಡುದಾರ ನಡುವೇ ಹೃದಯದೊಳು ಲಕ್ಷ್ಮೀ । ಬಡವರಾಧ್ಯೇಯ ವೆಂಕಟ ಬಂದ ಮನೆಗೆ ॥ ೪ ॥ ಬಾಲಾಚಂದ್ರನ ಪೋಲ್ವ ವೋಲೆ ಕುಂಡಲವೂ । ಮೇಲು ಮಾಣಿಕ್ಯಾ ನವರತ್ನಾದುಂಗುರವೂ ॥ ಕಾಲಾಲಂದುಗೆಯೂ ನವರತ್ನಾದ್ಹಾವಿಗೆಯೂ । ಮೇಲು ಗಿರಿವಾಸ ವೆಂಕಟ ಬಂದ ಮನೆಗೇ ॥ ೫ ॥ ಇಂದಿರೆ ರಮಣಾ ನೀ ಯೆನ್ನಾ ಕುಲ ತಿಲಕಾ । ನಂದಾನ ಕಂದಾ ಮುಕುಂದ ಗೋವಿಂದಾ ॥ ಬಂದೆನ್ನ ಪಾಪ ಬಂಧನ ಪರಿಹರಿಸೋ । ಕಂದರ್ಪಜನಕ ವೆಂಕಟ ಬಂದ ಮನೆಗೇ ॥ ॥ ೬ ॥ ಪಾಷಾಣ ರೂಪದ ಅಹಲ್ಯಾ ಶಾಪವನು । ಶೋಷಣೆ ಮಾಡಿದ ಸೊಬಗು ರೂಪಿನಲೀ ॥ ಶೇಷಾಚಲಧೀಶ ಮಹಶೇಷಶಯನ । ದಾಸ ಪಾಲಕನು ವೆಂಕಟ ಬಂದ ಮನೆಗೇ ॥ ೭ ॥ ಹೊಳೆವ ಪೀತಾಂಬರ ಉಡುಗೆ ಕಠಾರೀ । ಹೊಳೆವ ಕಂಗಳ ನೋಟ ಹೊಸ ಪಂಚಬಾಣಾ ॥ ವೀಳ್ಯದ ಬಾಯಾ ಕರ್ಪೂರ ಕರಡಿಗೆಯೂ । ಚೆಲುವ ಶರೀರಾ ವೆಂಕಟ ಬಂದ ಮನೆಗೆ ॥ ೮ ॥ ಗರುಡನನೇರಿ ಮೂಜಗವ ಮೋಹಿಸುತಾ । ಪರಮ ವೈಷ್ಣವರ ಪಾವನವಾ ಪಾಲಿಸುತಾ ॥ ಪರಿಪರಿಯ ತನ್ನ ಬಿರಿದಾ ಪೊಗಳಿಸುತಾ । ಪುರಂದರವಿಠಲಾ ವೆಂಕಟ ಬಂದ ಮನೆಗೆ ॥ ೯ ॥

## ೧೯೪. ರಾಗ ಸುರುಟಿ, ಛಾಪುತಾಳ.

ಹಲ್ಲಿ ನುಂಗಿತು ಹದಿನಾಲ್ಕು ಲೋಕವ । ಇಲ್ಲೆ ಕುಳಿತಿದೆ ಭೂತವು ॥ ॥ ಪಲ್ಲ ॥ ಸೂಳೆಯ ಮನೆಯಲ್ಲಿ ಅಂದದ ಕೋಳಿ । ಕೋಳಿಯ ನಾಲಿಗೆ ಯೇಳು ತಾಳ ಉದ್ದ ॥ ಕೋಳಿ ನುಂಗಿತು ಏಳು ಕಾಳಿಂಗ ನಾಗನ್ನ ।

ಮೇಲೊಂದು ಬೇಡಿತು ಸಿಂಹದ ಮರಿಯು ॥ ೧ ॥ ಕಾನನದೊಳ ಗೊಂದು ಅಂದದ ಕೋಣ । ಕೋಣನ ಕೊರಳಿಗೆ ಮುನ್ನೂರು ಬಾವಿ ॥ ಕೋಣ ನೀರಿಗೆ ಹೋಗಿ ಕ್ಷೋಣಿಕಪ್ಪೆಯು ಕೊಂದು । ದೊಡ್ಡ ಕೊಣ್ಣನ ಮನೆಯೊಳಗೌತಣವಯ್ಯಾ ॥ ೨ ॥ ವೃಕ್ಷದ ಮೇಲೊಂದು ಸೂಕ್ಷ್ಮದ ಪಕ್ಷಿಯು । ಪಕ್ಷಿ ಭಕ್ಷಿಸುತಲಿದೆ ಅಮೃತದ ಹಣ್ಣು ॥ ಪಕ್ಷಿ ನೋಡಲು ಬಂದ ರಾಕ್ಷಸ ಬ್ರಾಹ್ಮಣ । ಶಿಕ್ಷೆಯು ಮಾಡಿದ ಪುರಂದರವಿಠಲ ॥ ೩ ॥

## ೧೯೫. ರಾಗ ಸಾವೇರಿ, ಆದಿತಾಳ.

ತನಗಿಲ್ಲದಾ ವಸ್ತುವೆಲ್ಲಿದ್ದರೇನೂ । ತನ್ನ । ಮನಕೆ ಬಾರದ ಹೆಣ್ಣು ಮೆಚ್ಚಿ ಬಂದರೇನೂ ॥ ಪಲ್ಲ ॥ ಆದರಣೆಯಿಲ್ಲದೂಟವಮೃತಾನ್ನವಾದ ರೇನು । ವಾದಿಸುವ ಸತಿಸುತರು ಇದ್ದು ಫಲವೇನೂ ॥ ಕ್ರೋಧವನ್ನು ಬೆಳಸುವ ಸೋದರಿಗರಿದ್ದರೇನು । ಮಾದಿಗನ ಮನೆಯಲ್ಲಿ ಮದುವೆಯಾ ದರೇನು ॥ ೧ ॥ ಸಾವಿಗಿಲ್ಲದೌಷಧಿಯು ಸಂಚಿತುಂಬ ಇದ್ದರೇನು । ದೇವಕಿಸುತನ್ನೊಗಳದ ಕವಿತವೇನೂ ॥ ಹೇವವಿಲ್ಲದ ಗಂಡು ಹೆಚ್ಚಾಗಿ ಬಾಳಿದರೇನು । ಹಾವಿನ ಹೆಡೆಯೊಳಗೆ ಹಣವಿದ್ದರೇನು ॥ ೨ ॥ ಸನ್ಮಾನ ಮಾಡದ ದೊರೆ ಸಾವಿರಾರು ಕೊಟ್ಟರೇನು । ತನ್ನ ತಾ ತಿಳಿಯದ ಜ್ಞಾನವೇನೂ ॥ ಚೆನ್ನಾಗಿ ಪುರಂದರವಿಠಲನ ನೆನೆಯದವ । ಸನ್ಯಾಸಿ ಯಾದರೇನು ಷಂಡನಾದರೇನೂ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೯೬. ರಾಗ ಪಂತುವರಾಳಿ, ಅಟತಾಳ.

ತೇಲಿಸೋ ರಂಗ ಇಲ್ಲ ಮುಳುಗಿಸೋ ॥ ಪಲ್ಲ ॥ ನಿನ್ನ । ಕಾಲಿಗೆ ಬಿದ್ದೆನು ಪರಮ ದಯಾನಿಧೆ ॥ ಅನುಪಲ್ಲ ॥ ಸತಿಸುತ ಧನದಾಶೆಯೆಂ ತೆಂಬೊ ಲೋಭಕ್ಕೆ । ಹಿತದಿಂದ ಆಶೆಗೊಂಡು ಬಡವಾದೆನೊ ॥ ಗತಿ ಕೊಡುವರ ಕಾಣೆ ಮತಿಯು ಪಾಲಿಸೊ ಲಕ್ಷ್ಮಿ । ಪತಿ ನಿನ್ನ ಚರಣದ ಸ್ಮರಣೆ ಸಾಕೆನಗೆ ॥ ೧ ॥ ಜರೆ ರೋಗ ದಾರಿದ್ರ್ಯ ಕಶ್ಮಲವೆಂತೆಂಬೋ ।

ಶರಧಿಯೊಳಗೆ ಬಿದ್ದು ಮುಳುಗಿದೆನೊ ॥ ಸ್ಥಿರವಿಲ್ಲ ದೇಹಕ್ಕೆ ನೆರೆನಂಬಿದೆ ನಾ ನಿನ್ನ । ಕರುಣೋದಯವಿತ್ತು ಪಾಲಿಸೊ ಹರಿಯೆ ॥ ೨ ॥ ದೋಷವುಳ್ಳವ ನಾನು ಭಾಷೆ ಪಾಲಿಪೆ ನೀನು । ಮೋಸಹೋದೆನೊ ಭಕ್ತರ ನವಬಿಟ್ಟೆ ॥ ಶೇಷಶಯನ ಶ್ರೀಪುರಂದರವಿಠಲನಾ । ದಾಸರ ಸಂಗವಿತ್ತು ಪಾಲಿಸೊ ಹರಿಯೆ ॥ ೩ ॥ ಶ್ರೀಃ ॥

## ೧೯೭. ರಾಗ ಪಂತುವರಾಳಿ, ಅಟತಾಳ.

ಒಲ್ಲೆನೆ ವೈದಿಕ ಗಂಡನ । ನಾ । ನೆಲ್ಲಾದರು ಹೋಗಿ ಧುಮುಕುವೆನಮ್ಮ ॥ ಪಲ್ಲ ॥ ಉಟ್ಟೆನೆಂದರೆ ಇಲ್ಲ ತೊಟ್ಟೆನೆಂದರೆ ಇಲ್ಲ । ಕೆಟ್ಟ ಶೀರೆಯ ನಾನುಡಲಾರೆನೆ ॥ ಹಿಟ್ಟು ಕೊಳಸಿ ಯೆನ್ನ ರಟ್ಟೆಲ್ಲ ನೊಂದಾವು। ಎಷ್ಟೆಂತ ಹೇಳಲಿ ಕಷ್ಟದ ಒಗೆತನ ॥ ೧ ॥ ಕೃಷ್ಣಾಜಿನವನ್ನು ರಟ್ಟೆಲಿ ಹಾಕ್ಕೊಂಡು । ಬೆಟ್ಟಲಿ ಗಿಂಡಿಯ ಪಿಡಿದಿಹನೆ ॥ ದಿಟ್ಟತನದಿ ನಾನೆದುರಿಗೆ ಹೋದರೆ । ದೃಷ್ಟಿಯಿಂದಲೆನ್ನ ನೋಡನಮ್ಮ ॥ ೨ ॥ ಊಟಮಾಡಿದ ಮೇಲೆ ಕೂಟದ ಚಿತ್ತಿಲ್ಲ । ಕೊಟ್ಟರೆ ವೀಳ್ಯವನೊಲ್ಲೆನೆಂಬುವನೆ ॥ ಥಾಟಿಯ ತೋರುತ ಶಿಷ್ಯ ಜನರಿಗೆ । ಪಾಠವ ಹೇಳುತ ಕುಳುತಿಹನಮ್ಮ ॥ ೩ ॥ ನಿನ್ನಾಣೆ ಪುಸಿಯಲ್ಲ ಬಿನ್ನಣೆಯ ಮಾತಲ್ಲ । ಕಣ್ಣ ಸನ್ನೆಯೆಂಬದು ಮೊದಲೆ ಇಲ್ಲ ॥ ಮುನ್ನಿನ ಜನ್ಮದಿ ಪುರಂದರವಿಠಲನ । ಚೆನ್ನಾಗಿ ಪೂಜೆಯ ಮಾಡಲಿಲ್ಲ ॥ ೪ ॥ ಶ್ರೀಃ ॥

## ೧೯೮. ರಾಗ ಮೋಹನ, ಅಟತಾಳ.

ನೀನೇಕೆ ಕಡೆಗಣ್ಣೊಳೆನ್ನ ನೋಳ್ಪೆ । ಕರುಣಾಕರನಲ್ಲವೆ । ರಂಗ । ನೀನೇಕೆ ಕಡೆಗಣ್ಣೊಳೆನ್ನ ನೋಳ್ಪೆ ॥ ಪಲ್ಲ ॥ ಭಕ್ತವತ್ಸಲನಲ್ಲವೆ । ರಂಗ ಬಲು । ಭಾಗ್ಯವಂತನಲ್ಲವೆ ॥ ಅತ್ಯಪರಾಧಿ ನಾನಾದರೇನಯ್ಯ । ಇತ್ತ ಬಾರೆನ್ನಬಾರದೆ ॥ ೧ ॥ ಬಡವರಾಧಾರನಲ್ಲವೆ । ರಂಗ । ಕಡುಭಾಗ್ಯ ಉಳ್ಳವನಲ್ಲವೆ ॥ ಕಡುಪಾಪಿಯು ನಾನಾದರೇನಯ್ಯ । ಕಡೆಗೆ ಬಾ ಯೆನ್ನ ಬಾರದೆ ॥ ೨ ॥ ಶೂರತ್ವವುಳ್ಳವನಲ್ಲವೆ । ರಂಗ । ಸುಲಭರ ಅರಸನಲ್ಲವೆ ॥

ಯಾರು ಇಲ್ಲದ ಪರದೇಶಿ ನಾನಾದರೆ । ಸಾರಿ ಬಾ ಯೆನ್ನಬಾರದೆ ॥ ೩ ॥ ಬೇಲೂರ ಚೆನ್ನಿಗ ನೀನಲ್ಲವೆ । ರಂಗ । ತುಡುಗಾಯುನುಳ್ಳವನಲ್ಲವೆ ॥ ಹಲವು ಚಿಂತೆ ಯೆನಗಾದರೆ । ನೆಲೆಗೆ ಬಾ ಯೆನ್ನಬಾರದೆ ॥ ೪ ॥ ದೋಷಿಗ ನಾನಾದರೇನಯ್ಯ । ರಂಗ । ದೋಷರಹಿತ ನೀನಲ್ಲವೆ ॥ ವಾಸಿಯಿಂದಲಿ ನೀ ಸಲಹೊ ಯೆನ್ನ । ವಾಸುಕಿಶಯನ ಪುರಂದರ ವಿಠಲ ॥ ೫ ॥ ಶ್ರೀಃ ॥

೧೯೯. ರಾಗ ಯರಕಲಕಾಂಬೋಧಿ, ತ್ರಿಪುಟತಾಳ.

ಮತ್ತಾರು ಬರುವರು ನಿನ್ನ ಹಿಂದೆ ॥ ಇತ್ತ ಬಾರೆಂದು ಯಮ ಭಟರು ಸೆಳೆದೊಯ್ವಾಗ ॥ ಪಲ್ಲ ॥ ಸತಿಸುತರುಗಳು ಬರುವದಿಲ್ಲ । ನಿನ್ನ । ಹಿತವಾದ ಬಂಧು ಸ್ನೇಹಿತರು ಬರುವದಿಲ್ಲ ॥ ಕ್ಷಿತಿಮಾನ್ಯ ಕ್ಷೇತ್ರ ಬರುವದಿಲ್ಲ ಲಕ್ಷ್ಮಿ । ಪತಿಯೆಂಬನಲ್ಲದೆ ಗತಿಯೊಬ್ಬರಿಲ್ಲ ॥ ೧ ॥ ತುರಗ ಗಜಗಳು ಬರುವದಿಲ್ಲ । ನಿನ್ನ । ಮೆರವಣಿಗೆ ಮಾಡೊ ತನು ನಿನ್ನದಲ್ಲ ॥ ನರಪತಿಯ ಸೇವೆ ಸ್ಥಿರವಲ್ಲ । ನರ । ಹರಿಯೊಬ್ಬನಲ್ಲದೆ ಪರಗತಿಯಿಲ್ಲ ॥ ॥ ೨ ॥ ಧನಧಾನ್ಯಗಳು ಬರುವದಿಲ್ಲ । ನಿನ್ನ । ಅನುವಾದ ಕನಕ ಸಾಧನ ಗಳು ಬರುವದಿಲ್ಲ ॥ ಜನನಿ ಜನಕರು ಬರುವದಿಲ್ಲ । ಜಾನಕೀಪತಿ ಹೊರತು ಬೇರೆ ಗತಿಯಿಲ್ಲ ॥ ೩ ॥ ಈ ದೇಹ ನೀ ಬಿಟ್ಟ ಬಳಿಕ ಅವರ । ಬಾಧೆಗೋಸುಗ ಬೆಂಕಿಲಿ ಸುಡುತಿಹರೊ ॥ ಬೂದಿ ನೀರೊಳು ಚೆಲ್ಲು ತಿಹರೊ । ಬಂದು ಬೀದಿಯಲಿ ನಿಂತು ಬೊಬ್ಬೆಯ ಮಾಡುತಿಹರೊ ॥ ॥ ೪ ॥ ಇನ್ನಾದರು ತಿಳುಕೊಂಡು ಮತ್ತೆ । ಇನ್ನಾದರು ಅನ್ಯಗತಿ ಇಲ್ಲ ವೆಂದು ॥ ಎನ್ನೊಡೆಯ ನೀನೆ ಗತಿಯೆಂದು । ಈಗ । ಮನ್ನಿಸೊ ಪುರಂದ ರವಿಠಲ ಸಲಹೆಂದೂ ॥ ೫ ॥ ಶ್ರೀಃ ॥

೨೦೦. ರಾಗ ಶಂಕರಾಭರಣ, ತ್ರಿಪುಟತಾಳ.

ಮುದ್ದು ಮಾಡಲರಿಯ । ಯೆನ್ನಮ್ಮ ನೀ । ಮುದ್ದು ರಮಾದೇವಿ ॥ ॥ ಪಲ್ಲ ॥ ಮುದ್ದು ಬಾಲಕೃಷ್ಣನಲ್ಲಿ ಮನಸು ನಿಲ್ಲುವ ಹಾಗೆ ॥ ಅನುಪಲ್ಲ ॥

ವಚನಂಗಳಲ್ಲಿ ವಾಸುದೇವನ ಚರಿತೆಯು ॥ ರಚನೆಮಾಡುವದಲ್ಲಿ ರತಿ ನಿಲ್ಲುವ ಹಾಗೆ ॥ ೧ ॥ ಸಂತೆ ನೆರಹಿದ ಸತಿಸುತರು ತನ್ನಪರೆಂಬೊ ॥ ಭ್ರಾಂತಿಯ ಬಿಟ್ಟು ನಿಶ್ಚಿಂತೆಯಾಗುವ ಹಾಗೆ ॥ ೨ ॥ ಎನ್ನೊಡೆಯ ಶ್ರೀಪುರಂದರವಿಠಲನ್ನ ॥ ಸನ್ಮತಿಯಿಂದ ನಾನಾಡಿ ಪಾಡುವ ಹಾಗೆ ॥ ೩ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

### ೨೦೧. ರಾಗ ನಾದನಾಮಕ್ರಿಯೆ, ಆದಿತಾಳ.

ಪಗಡಿ ಹಾಕೆ ಪೋರಿ ತ್ರಿಗುಣಗಳೆಲ್ಲ ಮಾರಿ ॥ ಪಲ್ಲ ॥ ನೇಮದ ಶೀರೆಯನುಟ್ಟು ನಿನ್ನ । ಕಾಮದ ಕಚ್ಚೆಯ ಕಟ್ಟು ॥ ಪ್ರೇಮದ ಸಜ್ಜನರೊಳಗೆ ನಿಂತು । ಮಾತನಾಡೋಣ ಬಾರೆ ॥ ೧ ॥ ಹಿಂದಕೆ ಹೋಗಲು ಬೇಡ ನೀ । ಮುಂದಕೆ ಬಂದು ನಿಲ್ಲು ॥ ಹಿಂದಿನ ಮುಂದಿನ ಹಂಬಲ ಬಿಟ್ಟು । ಒಂದಾಟ ಆಡೋಣ ಬಾರೆ ॥ ೨ ॥ ತೊಡೆಯ ತೆರೆಯಬೇಡ ನಿ । ನ್ನೊಡೆಯನು ನಗುತಾನೆ ॥ ತೊಡೆಯ ತೆರದು ತೋರಿದರೆ । ನಾಚಿಕೊಂಬರಲ್ಲೇ ॥ ೩ ॥ ನೇಮ ನಿಷ್ಠೆಯ ನೀಗಿ ಅದು । ಸಾಮದಾನವಾಗಿ ॥ ಝಾಮ ಝಾಮ ಉಸುರು ಬಿಡದೆ । ಆಟವಾಡೋಣ ಬಾರೆ ॥ ೪ ॥ ಪಗಡಿ ಎಂಬದು ಅಲ್ಲ । ಪುಗಡಿ ಎಂಬದು ಸೊಲ್ಲ ॥ ಪಗಡಿ ಸೊಗಸು ಪುರಂದರ । ವಿಠಲನೊಬ್ಬ ಬಲ್ಲ ॥ ೫ ॥ ಶ್ರೀಃ ॥

### ೨೦೨. ರಾಗ ಸೌರಾಷ್ಟ್ರ, ಆದಿತಾಳ.

ಕೇಳೆ ಗೋಪಿ ಎನ್ನ ಕೂಡೆ ಈ ಕೃಷ್ಣ । ಆಡುವ ಮಾತುಗಳ ॥ ॥ ಪಲ್ಲ ॥ ಸೂಳೆಗಾರನಂತೆ ವೀಳ್ಯವ ಕೊಟ್ಟು । ವೇಳೆವೇಳೆಗೆ ಬರ ಹೇಳಿದ ॥ ಅನುಪಲ್ಲ ॥ ಪುಟ್ಟಪುಟ್ಟ ಕೈಯಗಟ್ಟಿ ಬೆಣ್ಣೆಯ ಮುದ್ದೆ । ಎಷ್ಟು ಬೇಕೆಂದರೆ ॥ ಬಟ್ಟ ಕುಚಂಗಳ ಮುಟ್ಟಿ ಕೈಲಿ ಪಿಡಿದು ಇದರಷ್ಟು ಬೇಕೆಂದನೆ ॥ ೧ ॥ ಚಿಕ್ಕವನೆಂದು ತರ್ಕಿಸಿಕೊಂಡರೆ । ಪಕ್ಕಗಳ ರಡು ಬಿಟ್ಟು ॥ ಹೊಕ್ಕುಳ ಕೆಳಗೆ ಬಿಕ್ಕಿಲಿಗಿಲಿಪ್ಪ । ಮಕ್ಕಳೆಲ್ಲಾದರುಂಟೆ ॥ ॥ ೨ ॥ ಬಾಲಕನೆಂದು ಲಾಲಿಸಿ ಕರೆದರೆ । ಲೋಲಾಡುತಲಿ ನಿಂತು ॥

ಹಾಲು ತುಪ್ಪವ ಕುಡಿದು ಸೀರೆಗೆ ಒರಸಿ । ಮೂಲೆಗೆ ಕೈಚಾಚಿದಾ ॥ ॥ ೩ ॥ ಎಲ್ಲ ಬೆಣ್ಣೆಯ ಮೆದ್ದು ನಮಗಿಷ್ಟು ಕೊಡೆಂದರೆ । ಇಲ್ಲು ಇಲ್ಲೆಂದು ॥ ಎಲ್ಲ ಬೆಣ್ಣೆಯ ಮೆದ್ದು ಚೆನ್ನಾಗಿ । ಬುಲ್ಲಿಯ ತೋರಿದ ॥ ೪ ॥ ಉಡಿಯ ಸೀರೆಯ ಬಿಚ್ಚಿ ದಡದ ಮೇಲಿಟ್ಟು । ಮಡುವಿನೊಳು ಪೊಕ್ಕು ತೊಳೆಯೆ ॥ ತಡವಾಯಿತೆಂದು ಉಟ್ಟ ಸೀರೆಯ ಕೊಂಡು । ಕಡಹದ ಮರನೇರಿದ ॥ ॥ ೫ ॥ ಬತ್ತಲಾಗಿದ್ದೆವು ಹಸ್ತವ ಮುಚ್ಚಿದೆವು । ಇತ್ತ ನೀ ನೋಡದಿರೊ ॥ ಹತ್ತಿಲಿ ಬಂದೆರಡು ಹಸ್ತವ ಮುಗಿದರೆ । ವಸ್ತ್ರವ ಕೊಡುವೆನೆಂದ ॥ ೬ ॥ ಗಾಡಿಗಾರ ರಂಗ ಗೋಡೆಯ ದಾಟಿ ಬಂದು । ಆಡುತಲೆ ನಿಂತನೆ ॥ ಮಾಡಬಾರದ ಕೆಲಸ ಮಾಡಿ ಪುರಂದರ । ವಿಠಲರಾಯ ಓಡಿ ಹೋವನೆ ॥ ೭ ॥ ಶ್ರೀಃ ॥

## ೨೦೩. ರಾಗ ಪಂತುವರಾಳಿ, ಆದಿತಾಳ.

ಆಡ ಹೋಗಲು ಬೇಡವೋ । ರಂಗಯ್ಯ । ಬೇಡಿಕೊಂಬೆನೊ ನಿನ್ನ ॥ ಪಲ್ಲ ॥ ಗಾಡಿಗಾತಿಯರ ಕೊಂಡಾಡಿ ಕೆಡಲು ಬೇಡ । ಕಾಡುವರೋ ನಿನ್ನನು ಮುಕುಂದ ॥ ಅನುಪಲ್ಲ ॥ ನೀರೊಳು ಮುಳುಗೆಂಬರೊ । ಬೆನ್ನಿನ ಮೇಲೆ । ಭಾರವ ಹೊರಿಸುವರೊ ॥ ಕೋರೆ ದಾಡೆಯ ಮುದ್ದಾಡಿ ಸೋಲಿಸುವರೊ । ಕರುಳ ಹಾರ ಕೊರಳನೆಂಬರೋ ॥ ೧ ॥ ಪುಟ್ಟ ರೂಪನೆಂಬರೊ । ಅಕ್ಕಯ್ಯ । ಕೊಡಲಿ ಪಿಡಿದನೆಂಬರೋ ॥ ಕಡೆಗಣ್ಣ ರುದ್ರನ ವರವುಳ್ಳ ದಶ । ಕಂಠನ ಕೊಂದವನೆಂಬರೊ ॥ ॥ ೨ ॥ ಬೆಣ್ಣೆ ಕಳ್ಳನೆಂಬರೊ । ಹೆಂಗಳನೆಲ್ಲ । ಭಂಗ ಮಾಡಿದನೆಂಬರೊ ॥ ಪುಟ್ಟ ಕುದುರೆಯೇರಿ ಕಲ್ಕಿರೂಪನಾಗಿ । ಪುರಂದರವಿಠಲ ಬಾ ಎಂಬರೊ ॥ ೩ ॥ ಶ್ರೀಃ ।

## ೨೦೪. ರಾಗ ಸೌರಾಷ್ಟ್ರ, ಅಟತಾಳ.

ನಡುಮನೆಯೊಳಗೊಂದು ನಾಲ್ಕು ತೆಂಗಿನ ಮರ । ಹೇ ಗಿಣಿಯೆ ಹೇ ಗಿಣಿಯೆ ॥ ಪಲ್ಲ ॥ ಅದು ತಲೆ ಮೊದಲಿಲ್ಲದೆ ಬೆಳತು ಹಣ್ಣಾಯಿತು । ಹೇ ಗಿಣಿಯೆ ಹೇ ಗಿಣಿಯೆ ॥ ಅನುಪಲ್ಲ ॥ ಕಾಲಿಲ್ಲದವ ಹತ್ತಿ ಕೈಯಿಲ್ಲ

ದವ ಕೊಯ್ದ । ಹೇ ಗಿಣಿಯೆ ಹೇ ಗಿಣಿಯೆ ॥ ಅದ । ತಲೆಯಿಲ್ಲದವ ಬಂದು ಹೊತ್ತು ತಂದಿಟ್ಟ । ಹೇ ಗಿಣಿಯೆ ಹೇಗಿಣಿಯೆ ॥ ೧ ॥ ಕಣ್ಣಿಲ್ಲ ದವ ನೋಡಿ ಕೆಂಪಿನ ಹಣ್ಣೆಂದ । ಹೇ ಗಿಣಿಯೇ ಹೇ ಗಿಣಿಯೆ ॥ ಅದ । ಬಾಯಿಲ್ಲದವ ತಿಂದು ಬಸುರೊಳಂಬನೆ ಬಿಟ್ಟ । ಹೇ ಗಿಣಿಯೆ ಹೇ ಗಿಣಿಯೆ ॥ ೨ ॥ ಹಾಲ ವೃಕ್ಷದ ಮೇಲೆ ಹಕ್ಕಿ ತಾಳಿಹುದು । ಹೇ ಗಿಣಿಯೆ ಹೇ ಗಿಣಿಯೆ ॥ ಅದ । ಹಲಬುತ್ತ ಈರೇಳು ಜಗವ ಮೋಹಿಸು ವಂತೆ । ಹೇ ಗಿಣಿಯೆ ಹೇ ಗಿಣಿಯೆ ॥ ೩ ॥ ಬಲೆಯ ಹಾಕಿದರದು ಬಲದಿ ಪಾಟುವದಯ್ಯ । ಹೇ ಗಿಣಿಯೆ ಹೇ ಗಿಣಿಯೆ ॥ ಅದ । ಸಲಹುವ ಪುರಂದರವಿಠಲರಾಯ । ಹೇ ಗಿಣಿಯೆ ಹೇ ಗಿಣಿಯೆ ॥ ೪ ॥ ಶ್ರೀಃ ॥

### ೨೦೫. ರಾಗ ಮುಖಾರಿ, ಆದಿತಾಳ.

ಏನು ಮಾಡ್ಯ ರಾವಣಾ । ನೀನು ಮಾಡ್ಯ ಸೀತೆಯ ತಂದಿದ್ಯಾ ॥ ॥ ಪಲ್ಲ ॥ ನಿನ್ನ ಬಳಿಗೆ ರಾಮೂ ಎನ್ನ ಕಳುಹಿ ಕೊಟ್ಟಾ । ಇನ್ನಾದರೂ ಸೀತೆಯ ಬಿಡುವಿಯೇನು ಮಾಡ್ಯ ॥ ಅನುಪಲ್ಲ ॥ ಕಾಣಾದೆ ಹೀಗೆ ಕದ್ದು ತರಬಹುದೆ ನನ್ನಿಂದ ತಪ್ಪೆಂದು ॥ ಹೊನ್ನ ಕಾಣಿಕೆ ಇತ್ತು ಬೆನ್ನ ಮರೆ ಯಾಗಿ ನೀ ಹೋಗಬಾರದೇನು ಮಾಡ್ಯ ॥ ೧ ॥ ಶೂರ್ಪನಖಿಯು ಹುಚ್ಚು ಹುಚ್ಚು ಮಾತು ಕೇಳಿ ॥ ಖರದೂಷಣರೇನಾದರು ಹೇಳು ಮಾಡ್ಯ ॥ ೨ ॥ ತಾತ ಕೌಸಲ್ಯ ರಘುನಾಥ ಹೇಳುವನಲ್ಲ ॥ ಈತನ ಶೌರ್ಯ ಮುಂಜೆ ತಿಳದೀತು ಮಾಡ್ಯ ॥ ೩ ॥ ಮಂಡೋದರಿ ಬಹಳ ಮಕ್ಕಳ ಪಡದಿದ್ದಾಳೆ ॥ ಕಂಡವರ ಬಾಯಿ ತುತ್ತು ಮಾಡಬೇಡ ಕಾಣೊ ಮಾಡ್ಯ ॥ ೪ ॥ ಅವ ತಾ ಮನುಜನಲ್ಲ ಪುರಂದರವಿಠಲ ॥ ಶಿರವ ಹೊಯ್ದು ಒಯ್ಯುವನು ತಿಳಿ ಮಾಡ್ಯ ॥ ೫ ॥ ಶ್ರೀಃ ॥

॥ ಶ್ರೀಮದ್ಧೇಶಾರ್ಪಣಮಸ್ತು ॥

### ೨೦೬. ರಾಗ ಕಾಂಬೋಧಿ, ಆದಿತಾಳ.

ಮುದ್ದು ತಾರೋ ರಂಗಯ್ಯ ಎದ್ದು ಬಾರೋ ॥ ಪಲ್ಲ ॥ ಅಂದವಾದ ಕರ್ಪೂರದ ಕರಡಿಗೆ ಬಾಯಲೊಮ್ಮೆ ॥ ಅನುಪಲ್ಲ ॥ ವಿಷವನುಣ

ಸಲು ಬಂದ । ಅಸುರೆ ಪೂತನಿಯ ಕೊಂದ ॥ ವಿಷವಲ್ಲವೊ ಮಗನೆ ನಿನ್ನ । ವಿಷವನುಂಡ ಬಾಯೊಳೊಮ್ಮೆ ॥ ೧ ॥ ಕಡೆವ ಸಮಯಕ್ಕೆ ಬಂದು । ಕಡೆವ ಸತಿಯ ಕೈಯ ಪಿಡಿದು ॥ ಕಡೆದ ಹೊಸ ಬೆಣ್ಣೆ ಯನೆಲ್ಲ । ಒಡನೆ ತಿಂಬೊ ಬಾಯೊಳೊಮ್ಮೆ ॥ ೨ ॥ ಗುರು ಪುರಂದರವಿಠಲ । ತೊರವೆಯ ನರಸಿಂಹನೆ ॥ ಕರದಾಗಲೆ ಮರಳು ಮಗನೆ ಜೊಲ್ಲ । ಸುರಿವ ಬಾಯೊಳೊಮ್ಮೆ ॥ ೩ ॥ ಶ್ರೀ ॥

## ೨೦೭. ರಾಗ ಮಂಜಿ, ಝಾಪುತಾಳ.

ಎನ್ನ ಬಿಟ್ಟು ನೀನಗಲದೆ ಶ್ರೀನಿವಾಸ ॥ ಪಲ್ಲ ॥ ನಿನ್ನ ನಂಬಿದ ದಾಸ ನಲ್ಲವೇನೋ ॥ ಅನುಪಲ್ಲ ॥ ತನುವೆಂಬೊ ಮಂಟಪದಿ ಮನವೆಂಬೊ ಹಸೆಮಂಚ । ಘನವಾದ ಸುಜ್ಞಾನ ॥ ದೀಪದ ಬೆಳಕಲ್ಲಿ । ಸನಕಾದಿವಂದ್ಯ ನೀ ಬೇಗ ಬಾರೊ ॥ ೧ ॥ ಪಂಚರಿವರು ಯಾವಾಗಲೂ । ಹೊಂಚ್ಹಾಕಿ ಎನ್ನನು ನೋಡುತಾರೆ ॥ ಕೊಂಚಗಾರರು ಆರುಮಂದಿ ಅವರು । ಹಿಂಚು ಮಿಂಚಿಲ್ಲದೆ ಎಳೆಯುತಾರೆ ॥ ೨ ॥ ಮುನ್ನ ಮಾಡಿದ ದುಷ್ಕರ್ಮದಿ ಬಳಲಿದೆ । ಇನ್ನಾದರೂ ನೀನೆನ್ನ ಕಾಯೋ ॥ ಘನ್ನ ಮಹಿಮ ಶ್ರೀಪುರಂದರವಿಠಲಾ । ಮನ್ನಿಸಿ ಮಮತೆಯೆನ್ನಲಿ ತೋರೋ ॥ ೩ ॥ ಶ್ರೀ ॥

## ೨೦೮. ರಾಗ ಭೈರವಿ, ಆದಿತಾಳ.

ಯಶೋದೆಯಮ್ಮ । ಯೆನ್ನನು ಎತ್ತಿಕೊಳ್ಳಮ್ಮ ॥ ಪಲ್ಲ ॥ ಬಿಸಿ ನೀರು ಕಾಸಬೇಡೆ । ಅಮ್ಮ ನೀನು ಗುಕ್ಕುಚ ಮಾಡಬೇಡ ॥ ಬಿಸಿ ಮೊಮ್ಮ ಉಪ್ಪುಕಾಯಿ ಅಮ್ಮ ನಾನು ಉಣಲಾರೆ । ಉತ್ತುತ್ತೆ ಹಣ್ಣು ಬೆಣ್ಣೆ ತಿಂದೇನೇ ॥ ೧ ॥ ಕಳ್ಳ ಕೃಷ್ಣ ಎನ್ನುತಾರೆ । ಬಂದನೆಂದು ಬೇಗ ಬೇಗ ತಿನ್ನುತಾರೆ ॥ ಗಲ್ಲ ಕಚ್ಚಿ ಕಚ್ಚಿ ಯೆನ್ನ ಹಲ್ಲು ಬಾಯಿ ನೋಯುತಿದೆ । ವಲ್ಲಭೇರು ಯೆನ್ನ ಗೋಪಿ ಕೊಲ್ಲುತಾರೆ ॥ ೨ ॥ ಸುಮ್ಮಾನೆ ಮಲಗಬೇಡ ಅಮ್ಮ ನೀನು ಯೆನ್ನ ಕಡೆ ನೋರಿಮಾಡೇ ॥ ಚಿಕ್ಕಾವು

ಕಂಡೆನೆ ಅಂಜಿಕೆ ಬರುತಿದೆ। ಕ್ಷಣಹೊತ್ತು ಯೆನ್ನ ಕೂಡೆ ಮಾತನಾಡೆ॥ ॥ ೩ ॥ ನಕ್ಷತ್ರ ತಂದುಕೊಡೆ। ಚಂದ್ರಮನ ಇತ್ತಿತ್ತ ಕರದುತಾರೆ॥ ಈಕ್ಷಿಸಿ ನಲಿವಂಥ ಪುರಂದರವಿಠಲನ। ಒಂದು ಬಾರಿ ಮುದ್ದಾಡಿ ಚಂದ ನೋಡೆ॥ ೪ ॥ ಶ್ರೀ॥

೨೦೯. ರಾಗ ಮುಖಾರಿ, ಝಂಪೆತಾಳ.

ವಾಸುದೇವನ ನಾಮಾವಳಿಯು ಕ್ಲೃಪ್ತಿಯನು। ವ್ಯಾಸರಾಯರ ಪರ್ಯಂತ ವರ್ಣಿಸಿದೆ ನಾನೂ॥ ಪಲ್ಲ॥ ಕೇದಾರ ರಾಮೇಶ್ವರ ಕಿರು ಕುಳದ ಭೂತಳದ। ಪಾದಾರವಿಂದ ತೀರ್ಥ ಪ್ರತಿ ಕ್ಷೇತ್ರವಾ॥ ಆದರದಿ ಲಕ್ಷ ಇಪ್ಪತ್ತೈದು ಸಾವಿರ ಕೃತಿಯ। ವೇದಶಾಸ್ತ್ರ ಪುರಾಣ ವಿವಿಧ ಸಮ್ಮತಿಯಿಂದ॥ ೧ ॥ ಸುಳಾದಿ ಅರವತ್ತು ನಾಲ್ಕು ಸಾಸಿರ ಬಹು ವ್ರತವು ನಾಮಾ। ವಳಿಯು ಮೂವತ್ತೈದು ಸಾಸಿರವಾಗಿ॥ ನಲಿದು ಶ್ವೇತದ್ವೀಪ ಅನಂತಾಸನ ವೈಕುಂಠ। ಸಲೆ ಶೇಷನ ಮಹಿಮೆಯು ಬಣ್ಣಿಸಿದೆನು॥ ೨ ॥ ಬ್ರಹ್ಮಲೋಕ ಕೈಲಾಸ ಭರದಿ ದಿಕ್ಪಾಲಕರ। ಪ್ರಮೇಯು ಎಂಭತ್ತು ಸಾಸಿರ ಪೇಳಿದೆನು॥ ಸನ್ಮತ ಹಲವು ಕಥೆಸಾರ ತೊಂಭತ್ತು ಸಾಸಿರವೂ। ಒಮ್ಮನದಿ ಹೇಳಿದೆನು ಒದಗಿ ಜನರೆಲ್ಲ ಕೇಳಿ॥ ೩ ॥ ಆಹ್ನಿಕ ಗುಣ ಜನ್ಮಾಷ್ಟಮಿ ಏಕಾದಶೀ। ನಿರ್ಣಯ ಶ್ರುತಿ ಸಹಿತ ವರ್ಣಿಸಿದೆನು॥ ಅನಘ ಅಗಣಿತ ಮೂರ್ತಿ ಗಂಡಕೀ ಶಿಲೆಯನು। ಘನ್ನ ಕಲ್ಯಾಣದೇಶ ಅರವತ್ತು ಸಾಸಿರದಿ॥ ೪ ॥ ಮಧ್ವರಾಯರ ಮಹಿಮೆ ಮಹಗುರು ಪರಂಪರೆ ಪ್ರ। ಸಿದ್ಧ ವ್ಯಾಸರಾಯರ ಪರಿ ಯಂತವೂ॥ ಸಿದ್ಧ ತಂತ್ರಸಾರೋಕ್ತ ಸೇವಕರ ತಾರತಮ್ಯ। ಉದ್ಧ ರಿಸಿ ನಾ ನಿಮಗೆ ಊರ್ವಿಯಲಿ ಪೇಳಿಸಿದೆ॥ ೫ ॥ ಅವರವರ ಮೂರ್ತಿ ಧ್ಯಾನ ಅವರವರ ವರಕೀರ್ತಿ ಮಾನ। ವಿವರದಲಿ ನಾ ನಿಮಗೆ ವಿಸ್ತರಿಸಿದೆ॥ ಹವಣೆಯಿಂದಿಪ್ಪತ್ತೈದು ಸಾಸಿರ ಕೃತಿಯನ್ನು। ಭುವನದಲಿ ಪೇಳಿದೆನು ಬುಧಜನರೆಲ್ಲ ಕೇಳಿ॥ ೬ ॥ ಇಂತು ನಾಲ್ಕು ಲಕ್ಷ ಎಪ್ಪತ್ತೊಂಭತ್ತು ಸಾಸಿರ ಕೃತಿಯಾ। ಕಂತು ಜನಕನ ನಾಮ ಘನ ಮಹಿ

ಮೆಯ ॥ ಸಂತಸದಿ ಶ್ರುತಿಸ್ಮೃತಿ ಸಮ್ಮತಿ ಪ್ರಮಾಣದಲಿ ಶ್ರೀ । ಮಂತ ಪುರಂದರವಿಠಲ ವ್ಯಾಸಮುನಿಗೆ ಪೇಳಿಸಿದಾ ॥ ೭ ॥ ಶ್ರೀಃ ॥

## ೨೧೦. ರಾಗ ಶಂಕರಾಭರಣ, ಅಟತಾಳ.

ಜೋ ಜೋ ಜೋಜೋ ಜೋ ಸಾಧುವಂತಾ । ಜೋಜೋ ಜೋಜೋ ಜೋ ಭಾಗ್ಯವಂತಾ । ಜೋಜೋ ಜೋಜೋ ಜೋ ಗುಣವಂತಾ । ಜೋಜೋ ಜೋಜೋ ಜೋ ಲಕ್ಷ್ಮೀಕಾಂತಾ ॥ ಜೋ ಜೋ ॥ ಪಲ್ಲ ॥ ಭಕ್ತವತ್ಸಲ ಭವಹರನೆ ಜೋಜೋ । ಕೃತ್ತಿವಾಸಪ್ರಿಯ ಕೃಷ್ಣನೆ ಜೋಜೋ ॥ ಮುಕ್ತಿದಾಯಕ ಮುರಹರನೆ ಜೋಜೋ ॥ ಚಿತ್ತಜನಯ್ಯ ಪರವಸ್ತುವೆ ಜೋಜೋ ॥ ೧ ॥ ಕರುಣಾಕರ ಕರಿವರದನೆ ಜೋಜೋ । ಸುರನರ ಮುನಿವಂದಿತನೆ ಜೋಜೋ ॥ ಗರುಡವಾಹನ ನಗಧರನೆ ಜೋಜೋ । ಖರದೂಷಣ ಸಂಹಾರನೆ ಜೋಜೋ ॥ ೨ ॥ ವಾರಿಜಾಕ್ಷ ವಿಶ್ವಪಾಲನೆ ಜೋಜೋ । ವಾರಿಧಿಶಯನ ನರಹರಿಯೆ ಜೋಜೋ ॥ ಘೋರದುರಿತ ಸಂಹಾರನೆ ಜೋಜೋ । ನಾರಾಯಣ ನರಹರಿಯೆ ಜೋಜೋ ॥ ೩ ॥ ಮಂದರಧರ ಮಾಧವನೆ ಜೋಜೋ । ನಂದನ ಕಂದ ಮುಕುಂದನೆ ಜೋಜೋ ॥ ಇಂದಿರೆಯರಸ ಗೋವಿಂದನೆ ಜೋಜೋ । ಸಿಂಧು ಬಂಧನ ರಾಮಚಂದ್ರನೆ ಜೋಜೋ ॥ ೪ ॥ ಚಕ್ರಧರ ಚತುರ್ಭುಜನೆ ಜೋಜೋ । ಶಕ್ರತನಯ ಸಖ ದೇವನೇ ಜೋಜೋ ॥ ಅಕ್ರೂರವರದ ಅಜತಾತನೆ ಜೋಜೋ । ವರದ ಶ್ರೀಪುರಂದರವಿಠಲನೆ ಜೋಜೋ ॥ ೫ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೨೧೧. ರಾಗ ಭೈರವಿ, ಝಂಪೆತಾಳ.

ಜಯ ಮಂಗಳಂ ನಿತ್ಯ ಶುಭಮಂಗಳಂ ॥ ಪಲ್ಲ ॥ ಸಚ್ಚಿದಾನಂದ ಸರ್ವಗುಣಪೂರ್ಣಗೆ । ಅತ್ಯಂತ ಸುಜ್ಞಾನಗಬ್ಬಾಕ್ಷಗೆ ॥ ಮೆಚ್ಚಿ ಗೋಪಿಯರೊಡನೆ ಮನವಿಟ್ಟು ಕೂಡಿದವಗೆ । ನಿತ್ಯ ಕಲ್ಯಾಣ ನಿರ್ದೋಷಗೆ ॥

॥ ೧ ॥ ವ್ಯಾಸಾವತಾರಗೆ ವೇದ ಉದ್ಧಾರಗೆ। ಸಾಸಿರಾ ನಾಮದಾ ಸರ್ವೇಶಗೆ ॥ ವಾಸವಾಗಿದ್ದ ಶ್ರೀವೈಕುಂಠನಿಲಯಗೆ । ಶೇಷಗಿರಿವಾಸ ವೆಂಕಟರಾಯಗೆ ॥ ೨ ॥ ಅಂಬರೀಷನ ಶಾಪ ಪರಿಹರಿಸಿದವನಿಗೆ । ತುಂಬುರು ನಾರದಾ ಮುನಿವಂದ್ಯಗೆ ॥ ಅಂಬುಜನಾಭಗೆ ಅಜನ ಪೆತ್ತವನಿಗೆ । ಕಂಬುಕಂಧರ ಪುರಂದರವಿಠಲರಾಯಗೆ ॥ ಜಯ ಮಂಗಳಂ ॥ ೩ ॥ ಶ್ರೀಃ ॥

### ೨೧೨. ರಾಗ ಭೈರವಿ, ಝುಂಪೆತಾಳ.

ಜಯ ಮಂಗಳಂ ನಿತ್ಯ ಶುಭಮಂಗಳಂ ॥ ಪಲ್ಲ ॥ ಇಂದೀವರಾಕ್ಷಗೆ ಇಭರಾಜ ವರದಗೆ। ಇಂದಿರಾರಮಣ ಗೋವಿಂದ ಹರಿಗೆ। ನಂದನಾ ಕಂದಗೆ ನವನೀತಚೋರಗೆ। ವೃಂದಾರಕೇಂದ್ರ ಉಡುಪಿಯ ಕೃಷ್ಣಗೆ ॥ ॥ ೧ ॥ ಕ್ಷೀರಾಬ್ಧಿವಾಸಗೆ ಕ್ಷಿತಿಜನಸುಪಾಲಗೆ । ಮಾರನ ಪಡೆದ ಮಂಗಳಮೂರ್ತಿಗೆ॥ ಚಾರು ಚರಣಗಳಿಂದ ಚೆಲುವ ಗಂಗೆಯ ಪಡೆದ। ಕಾರುಣ್ಯ ಮೂರ್ತಿಗೆ ಕೌಸ್ತುಭಧರಗೆ ॥ ೨ ॥ ವ್ಯಾಸಾವತಾರಗೆ ವೇದ ಉದ್ಧಾರಗೆ । ವಾಸಿತಾನಂತಪದ ಸಕಲೇಶಗೆ। ವಾಸುದೇವ ಮೂರ್ತಿ ಪುರಂದರವಿಠಲಗೆ । ದಾಸರಾ ಕಾಯ್ದ ರುಗ್ಮಿಣಿ ರಮಣಗೆ॥ ಜಯ ಮಂಗಳಂ ನಿತ್ಯ ಶುಭಮಂಗಳಂ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

---

## ಪುರಂದರದಾಸರ ಕೀರ್ತನೆಯ ೨ನೇ ಭಾಗವು

## ಸಂಪೂರ್ಣವು.

॥ ಶ್ರೀಕೃಷ್ಣಾರ್ಪಣಮಸ್ತು ॥

ಈ ಪುಸ್ತಕವು

ಪಾವಂಜೆ ಗುರುರಾವ್,

ಇವರ

**ಉಡುಪಿ ಶ್ರೀಕೃಷ್ಣ ಮುದ್ರಣಾಲಯದಲ್ಲಿ**

ಮುದ್ರಿಸಲ್ಪಟ್ಟು

**ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯದಿಂದ**

ಪ್ರಕಟಿಸಲ್ಪಟ್ಟಿತು.

ಶಾ. ಶಕ ೧೮೫೧.

**1928.**